| ಕ್ರ. ಸಂ | ಅಧಿಕಾರಿಯ ಹೆಸರು ಮತ್ತು ಪದನಾಮ | ದಿನಾಂಕ: 03.02.2009ರ ಅಧಿಕೃತ ಜ್ಞಾಪನ ಸಂಖ್ಯೆ: ಸಿಆಸುಇ 98 ಇಆಇ 2008ರನ್ವಯ ಜಾರಿಯಲ್ಲಿರುವ ಪ್ರಸ್ತುತ ಕಾರ್ಯ ಹಂಚಿಕೆ (ಕ್ರಮ ಸಂಖ್ಯೆ(1) ರಿಂದ (5)ಕ್ಕೆ ಸಂಬಂಧಿಸಿದಂತೆ) | ಪರಿಷ್ಕರಿಸಿದ ಕಾರ್ಯ ಹಂಚಿಕೆ | ಷರಾ |
|---|---|---|---|---|
| 1 | 2 | 3 | 4 | 5 |
| | | administrative and financial matters pertaining to the Directorate of EDCS and Government programs. Drawing and disbursing Officer of e-Governance Secretariat " | • All matters relating to Finance Commission<br>• Budget Speech<br>• Any other work that may be assigned by higher officers from time to time. | |
| 6 | Smt Uma Rani,<br>Jr. Programmer<br>(Existing work was allocated as per O.M. No. DPAR 37 EGM 2007, dated: 18.10.2007 read with O.M. No. DPAR 37 EGM 2007, dated: 07.11.2007 and O.M. No. DPAR 98 EGM 2008, dated: 25.09.2008) | • HRMS<br>• AMS<br>• Assisting 12th Finance Commission matters<br>• Creation of Kannada Portal<br>• Call centre related work<br>• Any other work assigned by higher officers from time to time. | • HRMS including training under HRMS Departmental Web Portal<br>• Maintenance of Bio-metric Attendance Monitoring System and Finger Print Devices,<br>• AMC of Bio-metric readers<br>• Any other work that may be assigned by higher officers from time to time. | |
| 7 | Smt. Mohana Bai<br>Jr. Console Operator<br>(Existing work was allocated as per O.M. No.DPAR 37 EGM 2007, dated: 18.10.2007 read with O.M. No: DPAR 37 EGM 2007, dated: 26.10.2007 and O.M No. DPAR 98 EGM 2008, dated: 25.09.2008) | • Maintenance of AMS and Finger Print Device, AMC of AMS readers<br>• Review of pending file and LMS & FMS<br>• Campaign of Birth & Death certificates<br>• Correspondence with DPAR for additional space as and when required and building renovation.<br>• Maintenance of telephone bills and Reliance internet cards. | • Sachivalaya Vahini implementation in the Karnataka Government Secretariat and Co-ordination with NIC and training<br>• Assistant Public Information Officer of e-Governance Secretariat<br>• Any other work that may be assigned by higher officers from time to time. | |
| 8 | Smt. Shobha<br>Programming Asst.2<br>(Existing work was allocated as per O.M. No.DPAR 37 EGM 2007, dated: 18.10.2007 read with O.M. No. DPAR 98 EGM 2008, dated: 25.09.2008) | "RDS & Nemmadi, all matters of Center for e-Governance (e-Procurement, KSWAN) Consultants and Data Entry Operatorsಿ Service and other matters, outsourcing printing services, State Data Centre. All Training matters. Directorate of EDCS (Bangalore-1) matters. LA/LC matters. Governor's speech. Advisory Board of e-Governance. DC and CEO conferences, Assurance and all legislative | • Assisting Desk Officer-1 in all administrative matters<br>• KDP meeting<br>• MMR meeting<br>• Annual Report<br>• LA/LC matters<br>• Governor's Speech<br>• Any other work that may be assigned by higher officers from time to time. | |

| ಕ್ರ. ಸಂ | ಅಧಿಕಾರಿಯ ಹೆಸರು ಮತ್ತು ಪದನಾಮ | ದಿನಾಂಕ: 03.02.2009ರ ಅಧಿಕೃತ ಜ್ಞಾಪನ ಸಂಖ್ಯೆ: ಸಿಆಸುಇ 98 ಇಆಇ 2008ರನ್ವಯ ಜಾರಿಯಲ್ಲಿರುವ ಪ್ರಸ್ತುತ ಕಾರ್ಯ ಹಂಚಿಕೆ (ಕ್ರಮ ಸಂಖ್ಯೆ(1) ರಿಂದ (5)ಕ್ಕೆ ಸಂಬಂಧಿಸಿದಂತೆ) | ಪರಿಷ್ಕರಿಸಿದ ಕಾರ್ಯ ಹಂಚಿಕೆ | ಷರಾ |
|---|---|---|---|---|
| 1 | 2 | 3 | 4 | 5 |
| | | Committee meetings. Signing of MOUs. Issues pertaining to DIT, CRs. Implementation of Sachivalaya Vahini in KGS and co-ordination with NIC in implementing Sachivalaya Vahini. PIO related works. All Administrative matters" | | |
| 9 | Sri. Shrinivasamurthy<br>FDA<br>(Existing work was allocated as per O.M. No.DPAR 37 EGM 2007, dated: 18.10.2007 read with O.M. No. DPAR 98 EGM 2008, dated: 25.09.2008) | • Budget speech<br>• Budget and Accounts matters<br>• All Annual Reports of the Department<br>• Maintenance of vehicles<br>• Preparation of Bills<br>• Annual Plans<br>• Approach to Five year Plan<br>• Reconciliation of accounts<br>• Training expenditure<br>• Building renovation<br>• Payment of reliance internet card<br>• All accounts matters<br>• Reply to Audit<br>• 20 point programme<br>• Additional Central Assistance as NeGP funding (Individual projects handled by Senior Programmer)<br>• Salary of Consultants and data entry operators<br>• All payment matters<br>• 12th Finance Commission matters<br>• Issues pertaining to DIT<br>• CRs. | • Budget and Accounts<br>• Maintenance of vehicles<br>• All Accounts matters, preparation of bills, reply to audit<br>• All matters of Finance Commissions<br>• All Payment matters<br>• Sending financial Proposals to FD & PD regarding e-Governance Programmes<br>• Building renovation<br>• Performance Budget of the Department<br>• Any other work that may be assigned by higher officers from time to time. | |
| 10 | Smt. Pushpa.M<br>S.D.A<br>(Existing work was allocated as per O.M. No. DPAR 37 EGM 2007, dated: 18.10.2007 read with O.M. No. DPAR 98 EGM 2008, dated: 25.09.2008) | • All leaves<br>• House keeping, maintenance and cleaning of e-Governance Secretariat matters<br>• Issue of temporary passes<br>• Any other work assigned by higher officers from time to time. | • R & I<br>• File marking & maintenance of running files<br>• Letter numbering<br>• Despatch of Tappals<br>• Issue of temporary passes<br>• Any other work that may be assigned by higher officers from time to time. | |

| ಕ್ರ. ಸಂ | ಅಧಿಕಾರಿಯ ಹೆಸರು ಮತ್ತು ಪದನಾಮ | ದಿನಾಂಕ: 03.02.2009ರ ಅಧಿಕೃತ ಜ್ಞಾಪನ ಸಂಖ್ಯೆ: ಸಿಆಸುಇ 98 ಇಆಇ 2008ರನ್ವಯ ಜಾರಿಯಲ್ಲಿರುವ ಪ್ರಸ್ತುತ ಕಾರ್ಯ ಹಂಚಿಕೆ (ಕ್ರಮ ಸಂಖ್ಯೆ(1) ರಿಂದ (5)ಕ್ಕೆ ಸಂಬಂಧಿಸಿದಂತೆ) | ಪರಿಷ್ಕರಿಸಿದ ಕಾರ್ಯ ಹಂಚಿಕೆ | ಷರಾ |
|---|---|---|---|---|
| 1 | 2 | 3 | 4 | 5 |
| 11 | Sri Srinivasappa<br>S.D.A<br>(Existing work was allocated as per O.M. No. DPAR 37 EGM 2007, dated: 18.10.2007 read with O.M. No. DPAR 98 EGM 2008, dated: 25.09.2008) | • Tappal of R & I<br>• Any other work assigned by higher officers from time to time.<br>• Documentation work | • Closure of pending files & maintenance of closed files<br>• House keeping, maintenance and cleaning of e-Governance Secretariat offices and training rooms.<br>• Maintenance of Stationery of e-Governance Secretariat.<br>• Any other work that may be assigned by higher officers from time to time. | |
| 12 | Sri Bairaiah<br>DEO<br>(Existing work was allocated as per O.M. No. DPAR 37 EGM 2007, dated: 18.10.2007 ) | • Empanelment of vendors,<br>• State level TAP and Sub-committee meetings,<br>• Training<br>• Any other work assigned by higher officers from time to time. | • Assisting in empanelment of vendors,<br>• Assisting in conducting State level TAP and Sub-committee meetings,<br>• Any other work that may be assigned by higher officers from time to time. | |

## ಅನುಬಂಧ–4

## ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ

## ತಿದ್ದೋಲೆ

ಸಂಖ್ಯೆ: ಸಿಆಸುಇ 121 ಇಆಇ 2009, ಬೆಂಗಳೂರು, ದಿನಾಂಕ: 03ನೇ ಅಕ್ಟೋಬರ್, 2009

**ವಿಷಯ :** ಸಿಆಸುಇ (ಇ-ಆಡಳಿತ)ದಲ್ಲಿನ ಅಧಿಕಾರಿಗಳಿಗೆ/ಸಿಬ್ಬಂದಿ ವರ್ಗದವರಿಗೆ ಸಂಬಂಧಿಸಿದಂತೆ, ಕಾರ್ಯಹಂಚಿಕೆ ಮಾಡುವ ಬಗ್ಗೆ.

**ಉಲ್ಲೇಖ :** ದಿನಾಂಕ: 26.08.2009ರ ಅ.ಜ್ಞಾ ಸಂಖ್ಯೆ: ಸಿಆಸುಇ 12 ಇಆಇ 2009

ಸಿಆಸುಇ (ಇ-ಆಡಳಿತ)ಯಲ್ಲಿನ ಅಧಿಕಾರಿಗಳಿಗೆ/ಸಿಬ್ಬಂದಿ ವರ್ಗದವರಿಗೆ ಸಂಬಂಧಿಸಿದಂತೆ, ಉಲ್ಲೇಖಿತ ದಿನಾಂಕ: 26.08.2009ರ ಅಧಿಕೃತ ಜ್ಞಾಪನದನ್ವಯ ಕಾರ್ಯಹಂಚಿಕೆಯನ್ನು ಮಾಡಲಾಗಿದ್ದು, ಆ ಅಧಿಕೃತ ಜ್ಞಾಪನಕ್ಕೆ ಲಗತ್ತಿಸಿದ ಪಟ್ಟಿಯ ಕಾಲಂ 4ರಲ್ಲಿ ಈ ಕೆಳಕಂಡ ತಿದ್ದುಪಡಿಗಳನ್ನು ಈ ಮೂಲಕ ಮಾಡಲಾಗಿದೆ:-

(1) ಸದರಿ ಪಟ್ಟಿಯ ಕ್ರಮ ಸಂಖ್ಯೆ: 1ರ ಕಾಲಂ 4ರಲ್ಲಿ "(1) Implementation of WAN, LAN and coordination related thereto", ಎಂಬುದನ್ನು ಈ ಕೆಳಕಂಡಂತೆ ತಿದ್ದುಪಡಿ ಮಾಡಿದೆ:-

"(1) Opinion required on file in respect of all technical matters related to the implementation of WAN, LAN and coordination related thereto"

(೨) ಸದರಿ ಪಟ್ಟಿಯ ಕ್ರಮ ಸಂಖ್ಯೆ:1ರ ಕಾಲಂ4ರಲ್ಲಿ "(3)All matters coming under the purview of EDCS such as Banagalore-One, replication of Bangalore-One in other cities, Nemmadi etc.," ಎಂಬುದನ್ನು ಈ ಕೆಳಕಂಡಂತೆ ತಿದ್ದುಪಡಿ ಮಾಡಿದೆ:-

**"(3)** Opinion required on file in respect of all technical matters coming under the purview of EDCS such as Banagalore -One, replication of Bangalore-One in other cities, Nemmadi etc.,"

(3) ಸದರಿ ಪಟ್ಟಿಯ ಕ್ರಮ ಸಂಖ್ಯೆ:1ರ ಕಾಲಂ4ರಲ್ಲಿ "(8)All matters related to the State Data Center " ಎಂಬುದನ್ನು ಈ ಕೆಳಕಂಡಂತೆ ತಿದ್ದುಪಡಿ ಮಾಡಿದೆ:-

"(8) Opinion required on file in respect of all technical matters related to the State Data Center"

(4) ಸದರಿ ಪಟ್ಟಿಯ ಕ್ರಮ ಸಂಖ್ಯೆ:3ರ ಕಾಲಂ4ರಲ್ಲಿ "(1)HRMS", ಎಂಬುದನ್ನು ಈ ಕೆಳಕಂಡಂತೆ ತಿದ್ದುಪಡಿ ಮಾಡಿದೆ:-

"(1) Opinion required on file in respect of all technical matters related to HRMS"

(5) ಸದರಿ ಪಟ್ಟಿಯ ಕ್ರಮ ಸಂಖ್ಯೆ:3ರ ಕಾಲಂ4ರಲ್ಲಿ "(9)All matters coming under the purview of the Center for e-Governance", ಎಂಬುದನ್ನು ಈ ಕೆಳಕಂಡಂತೆ ತಿದ್ದುಪಡಿ ಮಾಡಿದೆ:-

**"(9) Opinion required on file in respect of all technical matters coming under the purview of the Center for e-Governance"**

**ಟಿ. ಪಾತಲಿಂಗಯ್ಯ,**
ಪೀಠಾಧಿಕಾರಿ-1, (ಇ-ಆಡಳಿತ)
ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ

## ಅನುಬಂಧ–4ಎ

## ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ

**ಸೇರ್ಪಡೆ**

**ಸಂ: ಸಿಆಸುಇ 121 ಇಆಇ 2009, ಬೆಂಗಳೂರು, ದಿನಾಂಕ: 24ನೇ ನವಂಬರ್ 2009.**

ವಿಷಯ : ಸಿಆಸುಇ (ಇ-ಆಡಳಿತ)ದಲ್ಲಿನ ಅಧಿಕಾರಿಗಳಿಗೆ/ಸಿಬ್ಬಂದಿ ವರ್ಗದವರಿಗೆ ಸಂಬಂಧಿಸಿದಂತೆ, ಕಾರ್ಯ ಹಂಚಿಕೆ ಮಾಡುವ ಬಗ್ಗೆ.

ಉಲ್ಲೇಖ : 1. ದಿನಾಂಕ: 26.08.2009ರ ಅ.ಜ್ಞಾ ಸಂಖ್ಯೆ: ಸಿಆಸುಇ 121 ಇಆಇ 2009
2. ದಿನಾಂಕ: 03.10.2009ರ ಅ.ಜ್ಞಾ ಸಂಖ್ಯೆ: ಸಿಆಸುಇ 121 ಇಆಇ 2009
3. ಶ್ರೀಮತಿ ವಿಜಯಲಕ್ಷ್ಮಿ, ಜ್ಯೂನಿಯರ್ ಪ್ರೋಗ್ರಾಮರ್ ರವರ ದಿನಾಂಕ: 03.11.2009ರ ಮನವಿ.

ಸಿಆಸುಇ (ಇ-ಆಡಳಿತ)ಯಲ್ಲಿನ ಅಧಿಕಾರಿಗಳಿಗೆ/ಸಿಬ್ಬಂದಿ ವರ್ಗದವರಿಗೆ ಸಂಬಂಧಿಸಿದಂತೆ, ಮೇಲೆ (1)ರಲ್ಲಿ ಉಲ್ಲೇಖಿಸಿದ ದಿನಾಂಕ: 26.08.2009ರ ಅಧಿಕೃತ ಜ್ಞಾಪನದನ್ವಯ, ಅದನ್ನು ಮೇಲೆ ಉಲ್ಲೇಖಿಸಿದ ದಿನಾಂಕ: 03.10.2009ರ ಅಧಿಕೃತ ಜ್ಞಾಪನದೊಂದಿನ ಓದಿಕೊಂಡಂತೆ, ಇವುಗಳ ಪ್ರಕಾರ ಕಾರ್ಯ ಹಂಚಿಕೆ ಮಾಡಲಾಗಿದೆ. ಮೇಲೆ (3)ರಲ್ಲಿ ಉಲ್ಲೇಖಿಸಿದ, ದಿನಾಂಕ: 03.11.2009ರ ಮನವಿಯನ್ವಯ, ಮುಖ್ಯವಾಹಿನಿಯ ಪ್ರಭಾರವನ್ನು ಯಾರಿಗೆ ವಹಿಸಬೇಕೆಂಬ ಬಗ್ಗೆ ಪ್ರಸ್ತಾಪಿಸಲಾಗಿದೆ. ಈ ಹಿನ್ನೆಲೆಯಲ್ಲಿ ದಿನಾಂಕ: 26.08.2009ರ ಸದರಿ ಅಧಿಕೃತ ಜ್ಞಾಪನಕ್ಕೆ ಲಗತ್ತಿಸಿದ ಪಟ್ಟಿಯ ಕಾಲಂ 4ರಲ್ಲಿ ಈ ಕೆಳಕಂಡ ತಿದ್ದುಪಡಿಗಳನ್ನು ಈ ಮೂಲಕ ಮಾಡಲಾಗಿದೆ.

1. ಶ್ರೀ ಟಿ.ಶ್ರೀನಿವಾಸ್, ಹಿರಿಯ ಪ್ರೋಗ್ರಾಮರ್, ಇವರಿಗೆ ಸಂಬಂಧಿಸಿದ, ಸದರಿ ಪಟ್ಟಿಯ ಕ್ರಮ ಸಂಖ್ಯೆ: 2ರ ಕಾಲಂ 4ರಲ್ಲಿನ " (d)Implementation of Mukyavahini in CM's Secretariat' ಎಂಬುದನ್ನು ಈ ಮೂಲಕ ತೆಗೆದು ಹಾಕಲಾಗಿದೆ. ಈ ಕೆಳಕಂಡ ಹೊಸ ಸಂಖ್ಯೆಯನ್ನು, ಅಂದರೆ, ಕ್ರಮ ಸಂಖ್ಯೆ 13ರನ್ನು ದಿನಾಂಕ: 26.08.2009ರ ಸದರಿ ಅಧಿಕೃತ ಜ್ಞಾಪನದಲ್ಲಿ ಈ ಮೂಲಕ ಸೇರಿಸಲಾಗಿದೆ.

| ಕ್ರಮ ಸಂಖ್ಯೆ | ಅಧಿಕಾರಿಯ ಹೆಸರು | ಕಾರ್ಯ ಹಂಚಿಕೆ |
|---|---|---|
| 13 | **Smt. Vijayalaxmi**<br>**Junior Programmer** | "Implementation of Mukyavahini in Hon'ble Chief Minister's Secretariat."<br>"Any other works that may be assigned by higher officers from time to time" |

**ಜಿ. ಎಸ್. ಪ್ರಸನ್ನಕುಮಾರ್,**
ಪೀಠಾಧಿಕಾರಿ-1, (ಇ-ಆಡಳಿತ)
ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ

## ಅನುಬಂಧ–4ಬಿ

## ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ

**ಅಧಿಕೃತ ಜ್ಞಾಪನ**

**ಸಂಖ್ಯೆ: ಸಿಆಸುಇ 17 ಇಆಇ 2012 (ಭಾ-1) ಬೆಂಗಳೂರು, ದಿನಾಂಕ: 29ನೇ ನವೆಂಬರ್ 2012**

**ವಿಷಯ:** ಶ್ರೀ ಟಿ.ಶ್ರೀನಿವಾಸ್, ಸೀನಿಯರ್ ಪ್ರೋಗ್ರಾಮರ್-2, ಇವರ ಸೇವೆಯನ್ನು ಅನ್ಯ ಕರ್ತವ್ಯದ ಆಧಾರದ ಮೇಲೆ ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಇ-ಆಡಳಿತ)ಗೆ ನೀಡಲಾಗಿದ್ದು, ಅವರ ಸೇವೆಯನ್ನು ಅವರ ಮಾತೃ ಇಲಾಖೆಯಾದ ಮಾಹಿತಿ ತಂತ್ರಜ್ಞಾನ ಮತ್ತು ಜೈವಿಕ ತಂತ್ರಜ್ಞಾನ ನಿರ್ದೇಶನಾಲಯಕ್ಕೆ ಹಿಂದಿರುಗಿಸುವ ಬಗ್ಗೆ.

ಶ್ರೀ ಟಿ.ಶ್ರೀನಿವಾಸ್, ಸೀನಿಯರ್ ಪ್ರೋಗ್ರಾಮರ್-2, ಇವರ ಸೇವೆಯನ್ನು ಅನ್ಯ ಕರ್ತವ್ಯದ ಆಧಾರದ ಮೇಲೆ ಅವರ ಮಾತೃ ಇಲಾಖೆಯಾದ ಮಾಹಿತಿ ತಂತ್ರಜ್ಞಾನ ಮತ್ತು ಜೈವಿಕ ತಂತ್ರಜ್ಞಾನ ನಿರ್ದೇಶನಾಲಯದ ವತಿಯಿಂದ ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಇ-ಆಡಳಿತ)ಗೆ ನೀಡಲಾಗಿದೆ.

2. ಸದರಿಯವರ ಸೇವೆಯನ್ನು ಅವರ ಮಾತೃ ಇಲಾಖೆಯಾದ ಮಾಹಿತಿ ತಂತ್ರಜ್ಞಾನ ಮತ್ತು ಜೈವಿಕ ತಂತ್ರಜ್ಞಾನ ನಿರ್ದೇಶನಾಲಯಕ್ಕೆ ಈ ಮೂಲಕ ಹಿಂದಿರುಗಿಸಿದೆ.

3. ಸದರಿಯವರಿಗೆ ಹಂಚಿಕೆ ಮಾಡಲಾದ ಹಾಗೂ ಅವರು ನಿರ್ವಹಿಸುತ್ತಿರುವ ಕಾರ್ಯಭಾರದ ಎಲ್ಲಾ ಇತರೆ ವಿಷಯಗಳಿಗೆ ಸಂಬಂಧಿಸಿದ ಕಡತ, ದಾಖಲೆ, ವಹಿ, ದಾಸ್ತಾನು ಇತ್ಯಾದಿಗಳನ್ನು ಸಂಪೂರ್ಣವಾಗಿ ಅವರು ಈ ಕೆಳಕಂಡಂತೆ ಸಂಬಂಧಿಸಿದ ಅಧಿಕಾರಿ/ಸಿಬ್ಬಂದಿಯವರಿಗೆ ವಹಿಸಲು ಈ ಮೂಲಕ ಸೂಚಿಸಿದೆ:-

| ಅಧಿಕಾರಿ/ಸಿಬ್ಬಂದಿಯ ಹೆಸರು | ವಿಷಯ |
|---|---|
| ಶ್ರೀ ಗಂಗಾಧರ ನಿಂ ದಾಟನಾಳ, ಸೀನಿಯರ್ ಪ್ರೋಗ್ರಾಮರ್-1, ಸಿಆಸುಇ(ಇ-ಆಡಳಿತ) | (a) All technical matters related to SECLAN, LMS, FMS, CMS.<br>(b) All matters related to Sachivalaya Vahini, including training and co-ordination.<br>(c) Daily review meetings with consultants.<br>(d) Meetings of TAPs of the following departments:-<br>(i) Home Department<br>(ii) Transport Department<br>(iii) Social Welfare Department<br>(iv) Forest, Ecology and Environment, Department<br>(v) Rural Development and Panchayat Raj Department<br>(vi) Commerce and Industries Department<br>(vii) Labour Department<br>(viii) Planning Programme Monitoring and Statistics Department<br>(ix) Animal Husbandry and Fisheries Department<br>(x) Housing Department<br>(xi) Department of Public Enterprises |
| ಶ್ರೀ. ಸಿ.ಎಮ್.ಶ್ರೀನಿವಾಸಮೂರ್ತಿ, ಮೇಲ್ವಿಚಾರಕರು, ಸಿಆಸುಇ (ಇ-ಆಡಳಿತ) | (a) Maintenance of Stores<br>(b) All purchases related to the DPAR(e-Governance)<br>(c) Allocation of computers & other hardware to the departments of Karnataka Government Secretariat |

4. ಮೇಲೆ ಪಟ್ಟಿ ಮಾಡಿದ ವಿಷಯಗಳಲ್ಲದೆ, ಇತರೆ ವಿಷಯಗಳಿಗೆ ಸಂಬಂಧಿಸಿದಂತೆ ಅವರ (ಶ್ರೀ ಟಿ ಶ್ರೀನಿವಾಸ್ ರವರ) ವಶದಲ್ಲಿ ಕಡತ, ದಾಖಲೆ, ವಹಿ, ಇತ್ಯಾದಿಗಳು ಇದ್ದಲ್ಲಿ ಅವುಗಳನ್ನು ಸದರಿ ಸಿಬ್ಬಂದಿ/ ಅಧಿಕಾರಿಯವರಿಗೆ ವಹಿಸಲು ಸಹ ಈ ಮೂಲಕ ಸೂಚಿಸಿದೆ.

{ಸರ್ಕಾರದ ಪ್ರಧಾನ ಕಾರ್ಯದರ್ಶಿ, ಸಿಆಸುಇ(ಇ-ಆಡಳಿತ)ರವರು ಅನುಮೋದಿಸಿರುತ್ತಾರೆ.}

**ಈ. ಶಿವರುದ್ರಪ್ಪ,**
ಪೀಠಾಧಿಕಾರಿ-2,
ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ (ಇ-ಆಡಳಿತ)

***ಅನುಬಂಧ-5***

***ಇ-ಆಡಳಿತ ಸಚಿವಾಲಯದ ಅಧಿಕಾರಿ/ನೌಕರರುಗಳ ನಿರ್ದೇಶಿಕೆ***

| ಕ್ರ. ಸಂ | ಹೆಸರು | ಪದನಾಮ | ದೂರವಾಣಿ ಸಂಖ್ಯೆ |
|---|---|---|---|
| 1 | ಶ್ರೀ ಐ.ಎಸ್.ಎನ್.ಪ್ರಸಾದ್ | ಸರ್ಕಾರದ ಪ್ರಧಾನ ಕಾರ್ಯದರ್ಶಿ | 22353953 (Off),<br>22259109 (Fax)<br>prsegov@karnataka.gov.in |
| 2 | ಶ್ರೀ ಅಬ್ದುಲ್ ಖದೀರ್ | ಸರ್ಕಾರದ ಅಪರ ಕಾರ್ಯದರ್ಶಿ | 22032982<br>22258910 (Off)<br>adsegv@gmail.com |
| 3 | ಶ್ರೀ ಗಂಗಾಧರ ನಿಂ ದಾಟನಾಳ | ಸೀನಿಯರ್ ಪ್ರೋಗ್ರಾಮರ್-1 | 22032003 (Off),<br>srprog1-egov-dpar@karnataka.gov.in |
| 4 | ಶ್ರೀ ಹೆಚ್.ಎಸ್.ಶಂಕರ್ | ಸೀನಿಯರ್ ಪ್ರೋಗ್ರಾಮರ್-3 | 22032547(Off),<br>srprog3-egov-dpar@karnataka.gov.in |
| 5 | ಶ್ರೀ ಹೆಚ್.ಆರ್.ನಾಗರಾಜ | ಪೀಠಾಧಿಕಾರಿ-1 | 22032985 (Off), |
| 6 | ಶ್ರೀಮತಿ ಡಿ.ಎಸ್.ಉಮಾರಾಣಿ | ಜೂನಿಯರ್ ಪ್ರೋಗ್ರಾಮರ್ | 22032547 (Off),<br>jrprog2-egov-dpar@karnataka.gov.in |

| ಕ್ರ. ಸಂ | ಹೆಸರು | ಪದನಾಮ | ದೂರವಾಣಿ ಸಂಖ್ಯೆ |
|---|---|---|---|
| 7 | ಶ್ರೀಮತಿ ಎಸ್.ಶೋಭಾ | ಪ್ರೋಗ್ರಾಮಿಂಗ್ ಅಸಿಸ್ಟೆಂಟ್ | 22032985 (Off) |
| 8 | ಶ್ರೀ ಶ್ರೀನಿವಾಸ ಮೂರ್ತಿ ಸಿ.ಎಮ್ | ಮೇಲ್ವಿಚಾರಕರು | 22032652 (Off), |
| 9 | ಶ್ರೀಮತಿ ಬಿ.ವಿ. ಅರುಣಕುಮಾರಿ | ಪತ್ರಾಂಕಿತ ಆಪ್ತಸಹಾಯಕಿ | 22353953 (Off),<br>22259109 (Fax) |
| 10 | ಶ್ರೀಮತಿ ಬಿ.ಮಮತ | ಶೀಘ್ರಲಿಪಿಗಾರರು | 22353953 (Off),<br>22259109 (Fax) |
| 11 | ಶ್ರೀಮತಿ ಪುಷ್ಪ.ಎಮ್ | ದ್ವಿತೀಯ ದರ್ಜೆ ಸಹಾಯಕರು | 22032985 (Off) |
| 12 | ಶ್ರೀ ಆರ್.ಆಶಾಲತಾ | ಕಿರಿಯ ಸಹಾಯಕರು | 22032985 (Off) |
| 13 | ಶ್ರೀ ಎಸ್.ಸುಂದರ್ ರಾಜ್ | ದಲಾಯತ್ | 22032985 (Off) |
| 14 | ಶ್ರೀ ಶಿವಕುಮಾರ್ ಎ.ಎಸ್ | ದಲಾಯತ್ | 22032985 (Off) |

*ಅನುಬಂಧ-6*

*ಇ-ಆಡಳಿತ ಸಚಿವಾಲಯದ ಅಧಿಕಾರಿ/ನೌಕರರ ಮಾಸಿಕ ನಿವ್ವಳ ವೇತನ*

| ಕ್ರ. ಸಂ | ಹೆಸರು | ಪದನಾಮ | ಒಟ್ಟು ವೇತನ |
|---|---|---|---|
| 1 | ಶ್ರೀ ಐ.ಎಸ್.ಎನ್.ಪ್ರಸಾದ್ | ಸರ್ಕಾರದ ಪ್ರಧಾನ ಕಾರ್ಯದರ್ಶಿ | 1,51,338 |
| 2 | ಶ್ರೀ ಅಬ್ದುಲ್ ಖದೀರ್ | ಸರ್ಕಾರದ ಅಪರ ಕಾರ್ಯದರ್ಶಿ | 94,890 |
| 3 | ಶ್ರೀ ಗಂಗಾಧರ ನಿಂ ದಾಟನಾಳ | ಸೀನಿಯರ್ ಪ್ರೋಗ್ರಾಮರ್-1 | 54.400 |
| 4 | ಶ್ರೀ ಹೆಚ್.ಎಸ್.ಶಂಕರ್ | ಸೀನಿಯರ್ ಪ್ರೋಗ್ರಾಮರ್-3 | 56,128 |
| 5 | ಶ್ರೀ ಹೆಚ್.ಆರ್.ನಾಗರಾಜ | ಪೀಠಾಧಿಕಾರಿ-1 | 32,184 |
| 6 | ಶ್ರೀಮತಿ ಡಿ.ಎಸ್.ಉಮಾರಾಣಿ | ಜೂನಿಯರ್ ಪ್ರೋಗ್ರಾಮರ್ | 36,649 |
| 7 | ಶ್ರೀಮತಿ ಎಸ್.ಶೋಭಾ | ಪ್ರೋಗ್ರಾಮಿಂಗ್ ಅಸಿಸ್ಟೆಂಟ್ | 33,940 |
| 8 | ಶ್ರೀ ಶ್ರೀನಿವಾಸಮೂರ್ತಿ ಸಿ.ಎಮ್ | ಮೇಲ್ವಿಚಾರಕರು | 33,940 |
| 9 | ಶ್ರೀಮತಿ ಬಿ.ವಿ.ಅರುಣಕುಮಾರಿ | ಪತ್ರಾಂಕಿತ ಆಪ್ತ ಸಹಾಯಕಿ | 48,853 |
| 10 | ಶ್ರೀಮತಿ ಮಮತ ಬಿ | ಶೀಘ್ರಲಿಪಿಗಾರರು | 21,370 |
| 11 | ಶ್ರೀ ಗೋಪಾಲಕೃಷ್ಣ | ವಾಹನ ಚಾಲಕರು | 29,280 |
| 12 | ಶ್ರೀಮತಿ ಪುಷ್ಪ .ಎಮ್ | ದ್ವಿತೀಯ ದರ್ಜೆ ಸಹಾಯಕರು | 21,090 |
| 13 | ಶ್ರೀ ಆರ್.ಆಶಾಲತಾ | ಕಿರಿಯ ಸಹಾಯಕರು | 16,654 |
| 14 | ಶ್ರೀ ಎಸ್.ಸುಂದರ್ ರಾಜ್ | ದಲಾಯತ್ | 25,640 |
| 15 | ಶ್ರೀ ಶಿವಕುಮಾರ್ | ದಲಾಯತ್ | 21.090 |

**ಅನುಬಂಧ–7**

**ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ**

**ವಿಷಯ :** **ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ(ಇ-ಆಡಳಿತ)ಗೆ ಸಂಬಂಧಿಸಿದಂತೆ 2012-2013ನೇ ಸಾಲಿನ ಮುಂದುವರೆದ ಯೋಜನೆಗಳ ಮಂಜೂರಾತಿ ಕುರಿತು.**

ಓದಲಾಗಿದೆ :
1. ದಿನಾಂಕ: 02.02.2011 ಸರ್ಕಾರಿ ಆದೇಶ ಸಂಖ್ಯೆ:ಸಿಆಸುಇ 230 ಇಆತ 2010.
2. ದಿನಾಂಕ: 03.04.2010ರ ಸರ್ಕಾರದ ಆದೇಶ ಸಂಖ್ಯೆ:ಪಿಡಿ 5 ಐಎಂಎಂ 2010.
3. ದಿನಾಂಕ: 02.04.2012ರ ಸುತ್ತೋಲೆ ಸಂಖ್ಯೆ: ಪಿಡಿ 08 ಐಎಂಎಂ 2012.
4. ದಿನಾಂಕ: 09.04.2012 ರಂದು ಸರ್ಕಾರದ ಪ್ರಧಾನ ಕಾರ್ಯದರ್ಶಿ, ಸಿಆಸುಇ (ಇ- ಆಡಳಿತ) ಇವರ ಅಧ್ಯಕ್ಷತೆಯಲ್ಲಿ ನಡೆದ ಮುಂದುವರೆದ ಯೋಜನೆಗಳಿಗೆ ಮಂಜೂರಾತಿ ನೀಡುವ ಸಮಿತಿಯ ಸಭೆಯ ನಡವಳಿಗಳು.
5. ದಿನಾಂಕ: 31.03.2012ರ ಅಧಿಕೃತ ಜ್ಞಾಪನ ಸಂಖ್ಯೆ: ಎಫ್ ಡಿ 4 ಬಿಪಿಇ 2012.

ಪ್ರಸ್ತಾವನೆ:

1. 2012-2013 ನೇ ಸಾಲಿನಲ್ಲಿ ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ(ಇ-ಆಡಳಿತ)ಗೆ ಸಂಬಂಧಿಸಿದಂತೆ ಲೆಕ್ಕ ಶೀರ್ಷಿಕೆ "3451-00-090-2-04-059 (ಯೋಜನೆ)" ಯಡಿಯಲ್ಲಿ ವಿದ್ಯುನ್ಮಾನ ಆಡಳಿತ ಯೋಜನೆ ಹಾಗೂ ಇತರೆ ಖರ್ಚುಗಳಿಗಾಗಿ `.4500.00 (ನಾಲ್ಕು ಸಾವಿರದ ಐನೂರು) ಲಕ್ಷಗಳ ಅನುದಾನವನ್ನು ಒದಗಿಸಲಾಗಿದೆ. ಮೇಲೆ (1)ರಲ್ಲಿ ಓದಲಾದ ದಿನಾಂಕ: 02.02.2011ರ ಆದೇಶದನ್ವಯ ಸರ್ಕಾರಿ ಕಛೇರಿಗಳ ಆಧುನೀಕರಣ ಯೋಜನೆಯನ್ನು ಲೆಕ್ಕ ಶೀರ್ಷಿಕೆ "2070-00-800-0-04-125 (ಯೋಜನೆ)" ಯೊಂದಿಗೆ 2010-2011ನೇ ಸಾಲಿನಿಂದ ಅನ್ವಯಿಸುವಂತೆ ಶಾಶ್ವತವಾಗಿ ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಆ.ಸು)ಯಿಂದ ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಇ-ಆಡಳಿತ)ಗೆ ವರ್ಗಾಯಿಸಲಾಗಿದೆ ಹಾಗೂ ಆ ಲೆಕ್ಕ ಶೀರ್ಷಿಕೆಯಡಿ ಕಛೇರಿಗಳ ಆಧುನೀಕರಣದ ಯೋಜನೆಗಾಗಿ 2012-2013ನೇ ಸಾಲಿನ ಆಯವ್ಯಯದಲ್ಲಿ `.70.00 (ಎಪ್ಪತ್ತು) ಲಕ್ಷಗಳ ಅನುದಾನವನ್ನು ಒದಗಿಸಲಾಗಿದೆ.

2. ಮೇಲೆ (2)ರಲ್ಲಿ ಓದಲಾದ ದಿನಾಂಕ: 03.04.2010 ರ ಸರ್ಕಾರದ ಆದೇಶವನ್ನು ಮೇಲೆ (3)ರಲ್ಲಿ ಓದಲಾದ ದಿನಾಂಕ: 02.04.2012ರ ಸುತ್ತೋಲೆಯೊಂದಿಗೆ ಓದಿಕೊಂಡಂತೆ, ಇವುಗಳನ್ವಯ ರಚಿಸಲಾದ ಸಮಿತಿಯು ಮುಂದುವರೆದ ಯೋಜನೆಗಳನ್ನು ಮಂಜೂರು ಮಾಡಬಹುದಾಗಿದೆ. ಅದರಂತೆ ಮೇಲೆ (4) ರಲ್ಲಿ ಓದಲಾದ ದಿನಾಂಕ: 09.04.2012ರಂದು ಸರ್ಕಾರದ ಪ್ರಧಾನ ಕಾರ್ಯದರ್ಶಿ, ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ(ಇ-ಆಡಳಿತ) ಇವರ ಅಧ್ಯಕ್ಷತೆಯಲ್ಲಿ ನಡೆದ ಸದರಿ ಸಮಿತಿಯ ಸಭೆಯ ನಡವಳಿಗಳ ಪ್ರಕಾರ, ಪ್ರಸ್ತಾಪಿತ ಮುಂದುವರೆದ ಯೋಜನೆಗಳನ್ನು ವಿವರವಾಗಿ ಪರಿಶೀಲಿಸಿ, ಆ ಮುಂದುವರೆದ ಯೋಜನೆಗಳಿಗೆ (ಸರ್ಕಾರಿ ಕಛೇರಿಗಳ ಆಧುನೀಕರಣ ಯೋಜನೆಯೂ ಒಳಗೊಂಡಂತೆ) ಸಮಿತಿಯು ತನ್ನ ಮಂಜೂರಾತಿ ನೀಡಿದೆ.

3. ಮೇಲೆ (5)ರಲ್ಲಿ ಓದಲಾದ ದಿನಾಂಕ: 31.03.2012ರ ಅಧಿಕೃತ ಜ್ಞಾಪನದನ್ವಯ 2012-13ನೇ ಸಾಲಿನ ಆಯವ್ಯಯ ಅಂದಾಜುಗಳ (ಲೇಖಾನುದಾನ) ಪ್ರಕಾರ 01ನೇ ಏಪ್ರಿಲ್ 2012 ರಿಂದ 31ನೇ ಜುಲೈ 2012ರ ವರೆಗಿನ ಅವಧಿಯಲ್ಲಿ ವೆಚ್ಚ ಮಾಡಲು ಅನುಮತಿ ನೀಡಲಾಗಿದೆ.

4. ಮೇಲೆ ವಿವರಿಸಿದ ಹಿನ್ನೆಲೆಯಲ್ಲಿ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 3 ಯೋಜನೆ 2012, ಬೆಂಗಳೂರು ದಿನಾಂಕ: 09ನೇ ಏಪ್ರಿಲ್ 2012**

5. ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ (ಇ-ಆಡಳಿತ)ಗೆ ಸಂಬಂಧಿಸಿದಂತೆ, ಇದರೊಂದಿಗೆ ಲಗತ್ತಿಸಲಾದ ಅನುಬಂಧದಲ್ಲಿ ವಿವರಿಸಿರುವ ಯೋಜನೆಗಳನ್ನು ದಿನಾಂಕ: 01.04.2012 ರಿಂದ ಜಾರಿಗೆ ಬರುವಂತೆ, 2012-2013ನೇ ಸಾಲಿನ ಮುಂದುವರೆದ ಯೋಜನೆಗಳೆಂದು ಹಾಗೂ ಆ ಯೋಜನೆಗಳ ಅನುಷ್ಠಾನಕ್ಕಾಗಿ ಕ್ರಮವಾಗಿ `.4500.00 (ರೂಪಾಯಿ ನಾಲ್ಕು ಸಾವಿರದ ಐನೂರು) ಲಕ್ಷಗಳ ವೆಚ್ಚ ಹಾಗೂ `.70.00 (ಎಪ್ಪತ್ತು) ಲಕ್ಷಗಳ ವೆಚ್ಚ (ಒಟ್ಟು `. 4570 (ನಾಲ್ಕು ಸಾವಿರದ ಐನೂರ ಎಪ್ಪತ್ತು) ಲಕ್ಷಗಳ ವೆಚ್ಚವನ್ನು ಭರಿಸಲು ಸರ್ಕಾರವು ಈ ಮೂಲಕ ಮಂಜೂರಾತಿ ನೀಡಿದೆ.

6. ಅನುಬಂಧದಲ್ಲಿ ನೀಡಿರುವ ಯೋಜನೆಗಳ ನಿರ್ವಹಣೆಗೆ ತಗಲುವ ವೆಚ್ಚವನ್ನು ಪ್ರಸ್ತುತ, 2012-2013ನೇ ಸಾಲಿನ ಆಯವ್ಯಯ ಲೆಕ್ಕ ಶೀರ್ಷಿಕೆ "3451-00-090-02-04-059 ವಿದ್ಯುನ್ಮಾನ ಆಡಳಿತ ಯೋಜನೆ ಇತರೆ ವೆಚ್ಚಗಳು (ಯೋಜನೆ)" ಅಡಿಯಲ್ಲಿ ಒದಗಿಸಲಾದ `.4500.00 (`. ನಾಲ್ಕು ಸಾವಿರದ ಐನೂರು) ಲಕ್ಷಗಳ ಮತ್ತು ಸರ್ಕಾರಿ ಕಛೇರಿಗಳ ಆಧುನೀಕರಣ ಯೋಜನೆಗೆ ಸಂಬಂಧಿಸಿದ ಆಯವ್ಯಯ ಲೆಕ್ಕ ಶೀರ್ಷಿಕೆ "2070-00-800-0-04-125 (ಯೋಜನೆ)" ಅಡಿಯಲ್ಲಿ ಒದಗಿಸಲಾದ `. 70.00 (ಎಪ್ಪತ್ತು) ಲಕ್ಷಗಳ (ಒಟ್ಟು `.4570.00 (ನಾಲ್ಕು ಸಾವಿರದ ಐನೂರ ಎಪ್ಪತ್ತು) ಲಕ್ಷಗಳ ಅನುದಾನದಿಂದ ಭರಿಸತಕ್ಕದ್ದು.

7. ಈ ಆದೇಶವನ್ನು ಮೇಲೆ (2) ರಲ್ಲಿ ಓದಲಾದ ದಿನಾಂಕ: 03.04.2010ರ ಸರ್ಕಾರದ ಆದೇಶವನ್ನು ಮೇಲೆ (3) ರಲ್ಲಿ ಓದಲಾದ ದಿನಾಂಕ: 02.04.2012ರ ಸುತ್ತೋಲೆಯೊಂದಿಗೆ ಓದಿಕೊಂಡಂತೆ, ಇವುಗಳ ಹಾಗೂ ಮೇಲೆ (4) ರಲ್ಲಿ ಓದಲಾದ ದಿ ನಾಂಕ: 09.04.2012 ರಂದು ನಡೆದ ಸದರಿ ಸಮಿತಿಯ ಸಭೆಯ ನಡವಳಿಯ ಪ್ರಕಾರ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರಮತ್ತು ಅವರ ಹೆಸರಿನಲ್ಲಿ,

**ಪ್ರಶಾಂತ್‌ಕುಮಾರ್, ಎಸ್.ಬಿ.**

ಪೀಠಾಧಿಕಾರಿ-2,

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಇ-ಆಡಳಿತ)

**ಅನುಬಂಧ**

**ಸಿಆಸುಇ(ಇ-ಆಡಳಿತ)ಗೆ ಸಂಬಂಧಿಸಿದ 2012-13ನೇ ಸಾಲಿನ ಮುಂದುವರೆದ ಯೋಜನೆಗಳು**

**ಲೆಕ್ಕ ಶೀರ್ಷಿಕೆ "3451-00-090-02-04-059 ವಿದ್ಯುನ್ಮಾನ ಆಡಳಿತ ಯೋಜನೆ ಇತರೆ ವೆಚ್ಚಗಳು (ಯೋಜನೆ)" ಗೆ ಸಂಬಂಧಿಸಿದಂತೆ**

(`.ಲಕ್ಷಗಳಲ್ಲಿ)

| | | |
|---|---|---|
| 1. | ಕರ್ನಾಟಕ ಸರ್ಕಾರದ ಸಚಿವಾಲಯದ ವಿವಿಧ ಇಲಾಖೆಗಳಿಗೆ ಬೇಕಾಗುವ ಗಣಕ ಯಂತ್ರಗಳು, ಸರ್ವರ್, ಯು.ಪಿ.ಎಸ್., ಇ-ಸಾಧನೆಗಳು, ಪ್ರಿಂಟರ್ ಮತ್ತು ಪೂರಕ ಸಾಮಗ್ರಿಗಳೊಂದಿಗೆ ಅಂದರೆ ಇತರೆ ವೈರ್ ಲೆಸ್ ಹಾಗೂ ನೆಟ್ ವರ್ಕ್ ಸಾಧನಗಳು ಇತ್ಯಾದಿ ಮತ್ತು ಅವಶ್ಯವಿರುವ ಸಾಫ್ಟ್ ವೇರ್ ಖರೀದಿ. | 600.00 |

| | |
|---|---|
| 2. ಕರ್ನಾಟಕ ಸರ್ಕಾರದ ಸಚಿವಾಲಯದ ಗಣಕ ಯಂತ್ರ, ಪ್ರಿಂಟರ್, ಸರ್ವರ್, ಯು.ಪಿ.ಎಸ್. ಮತ್ತು ಹಾರ್ಡ್ವೇರ್‌ಗಳ ವಾರ್ಷಿಕ ನಿರ್ವಹಣೆ, ಲೋಕಲ್ ಏರಿಯಾ ನೆಟ್ ವರ್ಕ್ ಕ್ರಿಯಾ ಮತ್ತು ಕ್ರಿಯಾರಹಿತ ಟಕಗಳ (Active and Passive components) ವಾರ್ಷಿಕ ನಿರ್ವಹಣೆ ಮತ್ತು ಲೋಕಲ್ ಏರಿಯಾ ನೆಟ್ ವರ್ಕ್ ಸೌಲಭ್ಯ ನಿರ್ವಹಣೆ (Facility Management) ವಾರ್ಷಿಕ ನಿರ್ವಹಣೆ. | 300.00 |
| 3. ರಾಜ್ಯ ಮಾಹಿತಿ ಕೇಂದ್ರದ ಚಾಲನೆ ಮತ್ತು ನಿರ್ವಹಣೆ, ಹೊಸ ಇಲಾಖೆಗಳಿಗೆ ಯೋಜನೆಯ ವಿಸ್ತರಣೆಗೆ ಬೇಕಾಗಿರುವ ಸರ್ವರ್‌ಗಳು, ವಿಸ್ತರಣಾ ಸಲಕರಣೆಗಳು, ಮಾಹಿತಿ ತಂತ್ರಜ್ಞಾನ, ಮೂಲಭೂತ ಸೌಕರ್ಯಗಳ ಖರೀದಿ ಹಾಗೂ ಮಾಹಿತಿ ಕೇಂದ್ರ ಆಡಳಿತ, ನೆಟ್ ವರ್ಕ್ ಆಡಳಿತ ಹಾಗೂ ಕ್ಷೇತ್ರಿಯ ಆಡಳಿತಕ್ಕಾಗಿ ತಜ್ಞ ಮಾನವ ಶಕ್ತಿಯನ್ನು ಬಾಡಿಗೆಯ ಆಧಾರದ ಮೇಲೆ ಪಡೆಯುವುದು. | 450.00 |
| 4. ತರಬೇತಿ ಕಾರ್ಯಕ್ರಮಗಳು:<br>• ಸಾಮರ್ಥ್ಯ ಸಂಟನೆಗಾಗಿ (Capacity building) ಮುಖ್ಯ ಮಾಹಿತಿ/ನೋಡಲ್ ಅಧಿಕಾರಿಗಳ ತರಬೇತಿ:<br>• ಮುಖ್ಯ ಮಾಹಿತಿ/ನೋಡಲ್ ಅಧಿಕಾರಿಗಳು, ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು, ಕಾರ್ಯದರ್ಶಿಗಳು ಮತ್ತು ಇಲಾಖಾ ಮುಖ್ಯಸ್ಥರಿಗೆ ಇ-ಆಡಳಿತದಲ್ಲಿ ನೈಪುಣ್ಯತೆ ಹೊಂದಿರುವ ಕೇಂದ್ರಗಳಲ್ಲಿ ತರಬೇತಿ ನೀಡುವುದು.<br>• ಭವಿಷ್ಯತ್ತಿನಲ್ಲಿ ಅಧಿಕಾರಿ ಮತ್ತು ಸಿಬ್ಬಂದಿ ವರ್ಗದವರು ಮಾಹಿತಿ ಕೇಂದ್ರದಲ್ಲಿ ಅಥವಾ ಅವರ ಇಲಾಖೆಗಳ ವಿವಿಧ ನಿರ್ವಹಣೆಗಳನ್ನು ತಾವೇ ವಹಿಸಿಕೊಳ್ಳಲು ಸುರಕ್ಷತೆ, ನೆಟ್ ವರ್ಕ್, ಹಾರ್ಡ್ ವೇರ್ ಮುಂತಾದವುಗಳಲ್ಲಿ ಮುಂದುವರೆದ ತರಬೇತಿ ನೀಡುವುದು.<br>• ತರಬೇತಿಗೆ ಬೇಕಾಗುವ ಲೇಖನ ಸಾಮಗ್ರಿ ಮತ್ತು ಹಾರ್ಡ್ ವೇರ್ ಖರೀದಿ, ಕಾಫಿ-ಫಲಹಾರ ವ್ಯವಸ್ಥೆ, ತಜ್ಞ ತರಬೇತಿದಾರರಿಗೆ ಸಂಭಾವನೆ ಮತ್ತು ಸಮಾಲೋಚಕರ ಫೀ ಪಾವತಿ. | 75.00 |
| 5. ಕರ್ನಾಟಕ ವೆಬ್ ಸೈಟ್ ಮರುವಿನ್ಯಾಸಗೊಳಿಸಲು ಮಾರುಕಟ್ಟೆಯಿಂದ ಸಂಪನ್ಮೂಲಗಳನ್ನು ಬಾಡಿಗೆ ಪಡೆಯುವುದು, ಇಲಾಖೆಗಳು ತಮ್ಮ ವೆಬ್ ಸೈಟ್ ಗಳನ್ನು ಪ್ರದರ್ಶಿಸಲು ರಾಜ್ಯ ಮಾಹಿತಿ ಕೇಂದ್ರದ ಸೌಲಭ್ಯಗಳನ್ನು ಉಪಯೋಗಿಸಿಕೊಳ್ಳಲು ಸಹಾಯ ನೀಡುವುದು ಮತ್ತು ಇಡೀ ಕರ್ನಾಟಕ ಸರ್ಕಾರಕ್ಕೆ ಒಂದೇ ಪೋರ್ಟಲ್ ರಚಿಸಲು ಮತ್ತು ಇಂದೀಕರಿಸಲು ಸೂಕ್ತವಾದ ಯಾಂತ್ರಿಕ ಸಂಯೋಜನೆ ತಯಾರಿಸುವುದು. | 50.00 |
| 6. ಗ್ರಾಮೀಣ ಡಿಜಿಟಲ್ ಸೇವೆಗಳ ಯೋಜನೆ (RDS) ಅಂದರೆ ನೆಮ್ಮದಿ ಯೋಜನೆಯಡಿ ಸ್ಥಾಪಿಸಿರುವ ಟೆಲಿಸೆಂಟರ್ ಮೂಲಕ ಸೇವೆಗಳನ್ನು ಹೆಚ್ಚಿಸಲು ವಿವಿಧ ಇಲಾಖೆಗಳ ಆಂತರಿಕ ಪ್ರಕ್ರಿಯೆಗಳನ್ನು (Backend Process) ಮತ್ತು ಪದ್ಧತಿಗಳನ್ನು ಹೆಚ್ಚಿಸುವುದು. ಇದಲ್ಲದೆ, ಕಾರ್ಯಕ್ರಮದ ಅನುಷ್ಠಾನಕ್ಕಾಗಿ ಸ್ಥಾಪಿಸಿರುವ Central Monitoring Cell ನ ಸಿಬ್ಬಂದಿ ವೆಚ್ಚ ಭರಿಸುವುದು. | 50.00 |
| 7. ಇ-ಆಡಳಿತ ಸಚಿವಾಲಯವು ಏರ್ಪಡಿಸುವ ಸೆಮಿನಾರ್ ಮತ್ತು ವರ್ಕ್ ಶಾಪ್ ಇತ್ಯಾದಿ. | 15.00 |
| 8. ಕರ್ನಾಟಕ ಸರ್ಕಾರದ ಸಚಿವಾಲಯದ ಎಲ್ಲಾ ಇಲಾಖೆಗಳಿಗೆ ಬಾಹ್ಯಮೂಲದ ನೆಟ್ ವರ್ಕ್ ಪ್ರಿಂಟರ್ ಸೇವೆಯನ್ನು ಲಭ್ಯಗೊಳಿಸುವುದು. | 300.00 |
| 9. ಹಾಜರಾತಿ ನಿರ್ವಹಣೆ ಪದ್ಧತಿ (AMS) ನಿರ್ವಹಣೆ | 15.00 |
| 10. ಕರ್ನಾಟಕ ಒನ್ ಯೋಜನೆ-ಬೆಂಗಳೂರ್-ಒನ್ ಯೋಜನೆಯನ್ನು ಇತರ ನಗರಗಳಿಗೆ ವಿಸ್ತರಿಸುವುದು. | 160.00 |
| 11. ಬೆಂಗಳೂರಿನಲ್ಲಿ ಬೆಂಗಳೂರ್-ಒನ್ ಯೋಜನೆಯ ವಿಸ್ತರಣೆಗೆ ಅವಶ್ಯವಿರುವ ಒಳಾಂಗಣ ಅಲಂಕಾರ, ನಿವೇಶನ ತಯಾರಿಕೆ, ಬ್ಯಾಕ್ಎಂಡ್ ತಂತ್ರಾಂಶ ಸೃಜನೆ ಮುಂತಾದವುಗಳಿಗೆ ಬೇಕಾಗುವ ಅನುದಾನ ನೀಡುವುದು. | 180.00 |
| 12. ಮಾನವ ಸಂಪನ್ಮೂಲ ನಿರ್ವಹಣೆ ಪದ್ಧತಿ ನಿರ್ವಹಣೆ ಯೋಜನೆಯಡಿ (ವೇತನ ಮತ್ತು ಇತರೆ ವೆಚ್ಚಗಳು) | 165.00 |
| 13. ಕರ್ನಾಟಕ ರಾಜ್ಯ ವಿಸ್ತೃತ ಜಾಲ (KSWAN) ಯೋಜನೆಯ ಅನುಷ್ಠಾನಕ್ಕಾಗಿ ಬೇಕಾಗುವ ವೆಚ್ಚ ಹಾಗೂ ಸಿಬ್ಬಂದಿ ವೆಚ್ಚ | 1650.00 |
| 14. ಸ್ಟೇಟ್ ಪೋರ್ಟಲ್ ಮತ್ತು ಸರ್ವೀಸ್ ಡಿಲಿವರಿ ಗೇಟ್ ವೇ (State Portal and State Delivery Gateway [SSDG]) ಯೋಜನೆ | 340.00 |
| 15. ಕರ್ನಾಟಕ ನಿವಾಸಿ ದತ್ತಾಂಶ ಕೇಂದ್ರ [Karnataka Resident Data Hub (KRDH)] ಯೋಜನೆ | 100.00 |
| 16. 2011-12ನೇ ಸಾಲಿನ ಒಂದು ಬಾರಿಯ ಹೆಚ್ಚುವರಿ ಕೇಂದ್ರ ಸಹಾಯ {One Time Additional Central Assistance(OTACA)} ದಡಿ ಮೊಬೈಲ್ ಆಡಳಿತ (Mobile Governance under innovative project) ಮತ್ತು ಕೌಂಟರ್‌ನಲ್ಲಿ ನಾಗರೀಕರಿಗೆ ಸೇವೆಗಳ ವಿತರಣೆ (Over the counter delivery of citizen services) ಯೋಜನೆ | 50.00 |

**ಲೆಕ್ಕ ಶೀರ್ಷಿಕೆಯಾದ "2070-00-800-0-04-125 (ಯೋಜನೆ)" ಸರ್ಕಾರಿ ಕಛೇರಿಗಳ ಆಧುನೀಕರಣ ಯೋಜನೆಗೆ ಸಂಬಂಧಿಸಿದಂತೆ**

| | |
|---|---|
| 17. ಸರ್ಕಾರಿ ಕಛೇರಿಗಳ ಆಧುನೀಕರಣ | **70.00** |
| **ಒಟ್ಟು** | **4570.00** |

**ಪ್ರಶಾಂತ್‌ಕುಮಾರ್, ಎಸ್.ಬಿ.**
ಪೀಠಾಧಿಕಾರಿ-2,
ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಇ-ಆಡಳಿತ)

P.R. 34

## ಸಮಾಜ ಕಲ್ಯಾಣ ಸಚಿವಾಲಯ

**ಸಂಖ್ಯೆ. ಎಸ್‌ಡಬ್ಲ್ಯೂಡಿ 199 ಎಸ್‌ಎಡಿ 2010 ಬೆಂಗಳೂರು, ದಿನಾಂಕ 21-11-2012.**

**ಅಧಿಸೂಚನೆ**

ಕರ್ನಾಟಕ ರಾಜ್ಯ ಅನುಸೂಚಿತ ಜಾತಿಗಳು ಮತ್ತು ಅನುಸೂಚಿತ ಪಂಗಡಗಳ ಆಯೋಗದ ನಿಯಮಗಳು, 2011ರ ಕರಡನ್ನು ಕರ್ನಾಟಕ ರಾಜ್ಯ ಅನುಸೂಚಿತ ಜಾತಿಗಳು ಮತ್ತು ಅನುಸೂಚಿತ ಪಂಗಡಗಳ ಅಧಿನಿಯಮ, 2002 (ಕರ್ನಾಟಕ ಅಧಿನಿಯಮ ಸಂಖ್ಯೆ 2002ರ 20)ರ 14ನೇ ಪ್ರಕರಣದ ಮೂಲಕ ಅಗತ್ಯಪಡಿಸಲಾದಂತೆ, ಅಧಿಸೂಚನೆ ಸಂಖ್ಯೆ ಎಸ್‌ಡಬ್ಲ್ಯೂಡಿ 199 ಎಸ್‌ಎಡಿ 2010 ದಿನಾಂಕ 16-06-2011ನ್ನು ಕರ್ನಾಟಕ ರಾಜ್ಯಪತ್ರ ದಿನಾಂಕ 14-07-2011ರ ಭಾಗ IVಎ ರಲ್ಲಿ ಇದರಿಂದ ಭಾದಿತರಾಗುವ ಎಲ್ಲ ವ್ಯಕ್ತಿಗಳಿಂದ ಇದನ್ನು ಪ್ರಕಟಿಸಿದ ದಿನಾಂಕದಿಂದ ಮೂವತ್ತು ದಿನಗಳ ಒಳಗೆ ಆಕ್ಷೇಪಣೆಗಳು ಮತ್ತು ಸಲಹೆಗಳನ್ನು ಆಹ್ವಾನಿಸಿ ಪ್ರಕಟಿಸಿರುವುದರಿಂದ;

ಮತ್ತು ಸದರಿ ರಾಜ್ಯಪತ್ರವನ್ನು 14-07-2011ರಂದು ಸಾರ್ವಜನಿಕರಿಗೆ ಲಭ್ಯವಾಗುವಂತೆ ಮಾಡಿರುವುದರಿಂದ;

ಮತ್ತು ಸದರಿ ಕರಡು ಪತ್ರಕ್ಕೆ ಸಂಬಂಧಪಟ್ಟಂತೆ ಆಕ್ಷೇಪಣೆಗಳು ಮತ್ತು ಸಲಹೆಗಳನ್ನು ಪರಿಗಣಿಸಿರುವುದರಿಂದ;

ಈಗ, ಕರ್ನಾಟಕ ರಾಜ್ಯ ಅನುಸೂಚಿತ ಜಾತಿಗಳು ಮತ್ತು ಅನುಸೂಚಿತ ಪಂಗಡಗಳ ಆಯೋಗದ ಅಧಿನಿಯಮ, 2002 (ಕರ್ನಾಟಕ ಅಧಿನಿಯಮ, 2002ರ 20)ರ 14ನೇ ಪ್ರಕರಣದ ಮೂಲಕ ಪ್ರದತ್ತವಾದ ಅಧಿಕಾರಗಳನ್ನು ಚಲಾಯಿಸಿ, ಕರ್ನಾಟಕ ಸರ್ಕಾರವು ಈ ಮುಂದಿನ ನಿಯಮಗಳನ್ನು ರಚಿಸುತ್ತದೆ, ಎಂದರೆ:-

**ನಿಯಮಗಳು**

**1. ಹೆಸರು ಮತ್ತು ಪ್ರಾರಂಭ:-** (1) ಈ ನಿಯಮಗಳನ್ನು, ಕರ್ನಾಟಕ ರಾಜ್ಯ ಅನುಸೂಚಿತ ಜಾತಿಗಳು ಮತ್ತು ಅನುಸೂಚಿತ ಪಂಗಡಗಳ ಆಯೋಗದ ನಿಯಮಗಳು, 2012 ಎಂದು ಕರೆಯತಕ್ಕದ್ದು.

(2) ಇವು, ಸರ್ಕಾರಿ ರಾಜ ಪತ್ರದಲ್ಲಿ ಪ್ರಕಟವಾದ ದಿನಾಂಕದಿಂದ ಜಾರಿಗೆ ಬರತಕ್ಕದ್ದು.

**2. ಪರಿಭಾಷೆ:-** ಈ ನಿಯಮಗಳಲ್ಲಿ, ಸಂದರ್ಭವು ಅನ್ಯಥಾ ಅಗತ್ಯಪಡಿಸಿದ ಹೊರತು.-

1) "ಅಧಿನಿಯಮ" ಎಂದರೆ ಕರ್ನಾಟಕ ರಾಜ್ಯ ಅನುಸೂಚಿತ ಜಾತಿಗಳು ಮತ್ತು ಅನುಸೂಚಿತ ಪಂಗಡಗಳ ಆಯೋಗದ ಅಧಿನಿಯಮ, 2002 (ಕರ್ನಾಟಕ ಅಧಿನಿಯಮ, 2002ರ 20);

2) "ಅಧ್ಯಕ್ಷ" ಎಂದರೆ ಅಧಿನಿಯಮದ 3ನೇ ಪ್ರಕರಣದ 2(ಎ) ಉಪಪ್ರಕರಣದ ಮೇರೆಗೆ ರಾಜ್ಯ ಸರ್ಕಾರವು ನಾಮ ನಿರ್ದೇಶಿಸಿದ ಆಯೋಗದ ಅಧ್ಯಕ್ಷ;

3) "ಸರ್ಕಾರ" ಎಂದರೆ ಕರ್ನಾಟಕ ಸರ್ಕಾರ;

4) "ಆಯೋಗ" ಎಂದರೆ ಕರ್ನಾಟಕ ರಾಜ್ಯ ಅನುಸೂಚಿತ ಜಾತಿಗಳು ಮತ್ತು ಅನುಸೂಚಿತ ಪಂಗಡಗಳ ಆಯೋಗ;

5) "ಸದಸ್ಯ" ಎಂದರೆ ಯುಕ್ತವಾಗಿ ನೇಮಕಗೊಂಡ ಆಯೋಗದ ಸದಸ್ಯ;

6) ಅನುಸೂಚಿತ ಜಾತಿಗಳು ಮತ್ತು ಪಂಗಡಗಳು ಎಂಬ "ವ್ಯಾಖ್ಯಾನವು" ಭಾರತ ಸಂವಿಧಾನದ 366ನೇ ಅನುಚ್ಛೇದ 24 ಮತ್ತು 25ನೇ ಖಂಡಗಳಲ್ಲಿ ಇವುಗಳಿಗೆ ಕ್ರಮವಾಗಿ ನೀಡಲಾದ ಅರ್ಥಗಳನ್ನೇ ಹೊಂದಿರತಕ್ಕದ್ದು;

**ಅಧ್ಯಾಯ - II**

**3. ಆಯೋಗದ ಅಧ್ಯಕ್ಷ, ಸದಸ್ಯರ ವೇತನ ಮತ್ತು ಭತ್ಯೆಗಳು:-**

1) ಸರ್ಕಾರವು, ಅಧ್ಯಕ್ಷರಿಗೆ ನೀಡಿದ ಸ್ಥಾನಮಾನಗಳಿಗನುಸಾರವಾಗಿ ವೇತನ ಮತ್ತು ಭತ್ಯೆಗಳು ಮತ್ತು ಇತರ ವಿಶೇಷ ಸೌಲಭ್ಯಗಳಿಗೆ ಹಕ್ಕುಳ್ಳವರಾಗಿರುತ್ತಾರೆ. ಅಧ್ಯಕ್ಷರು ಕರ್ನಾಟಕ ರಾಜ್ಯದ ವಿಧಾನಮಂಡಲದ ಸದಸ್ಯರಾಗಿದ್ದರೆ, ಅವರ ಸಂಬಂಧಪಟ್ಟ ಅಧಿನಿಯಮ / ನಿಯಮಗಳ ಮೇರೆಗೆ ವಿಧಾನ ಮಂಡಲದ ಸದಸ್ಯರಾಗಿ ಪಡೆಯುವ ಭತ್ಯೆಗಳನ್ನು ಹೊರತುಪಡಿಸಿ ಯಾವುದೇ ಇತರ ಪರಿಶ್ರಮ ಧನಕ್ಕೆ ಹಕ್ಕುಳ್ಳವನಾಗಿರತಕ್ಕದ್ದಲ್ಲ. ಸರ್ಕಾರದಿಂದ ಅಥವಾ ಹಿಂದಿನ ಸೇವೆಗೆ ಸಂಬಂಧಿಸಿದಂತೆ ನಿವೃತ್ತಿ ವೇತನವನ್ನು ಪಡೆಯುವಂಥ ಯಾರೇ ವ್ಯಕ್ತಿಯನ್ನು ಅಧ್ಯಕ್ಷ ಎಂದು ನೇಮಕ ಮಾಡಿರುವಾಗ ಈ ನಿಯಮಗಳ ಮೇರೆಗೆ ಅವನಿಗೆ ಅನ್ವಯವಾಗುವ ವೇತನವು ಆ ನಿವೃತ್ತಿ ವೇತನದ ಮೊಬಲಗಿಗಿಂತ ಕಡಿಮೆ ಇರತಕ್ಕದ್ದು.

2) ಸದಸ್ಯ ಕಾರ್ಯದರ್ಶಿಯನ್ನು ಹೊರತುಪಡಿಸಿ ಸದಸ್ಯರು, ಈ ಮುಂದಿನ ಉಪವೇಶನ ಸಂಭಾವನೆ ಮತ್ತು ಭತ್ಯೆಗಳನ್ನು ಪಡೆಯಲು ಹಕ್ಕುಳ್ಳವರಾಗಿರತಕ್ಕದ್ದು, ಎಂದರೆ:-

ಎ) ಆಯೋಗದ ಪ್ರತಿಉಪವೇಶನ / ಸಭೆಯ ಉಪವೇಶನದ ಸಂಭಾವನೆಯು ರೂ. 1000/- ಆಗಿದ್ದು ಇದು ತಿಂಗಳಿಗೆ ರೂ. 20,000/- ಮೀರತಕ್ಕದ್ದಲ್ಲ.

ಬಿ) ಸ್ಥಳೀಯ ಪ್ರಯಾಣವೆಚ್ಚ, ದೂರವಾಣಿ, ಇತರ ವೆಚ್ಚಗಳಿಗಾಗಿ ಮಾಸಿಕ ಭತ್ಯೆಗಳು ರೂ. 5000/- (ಐದು ಸಾವಿರ ರೂಗಳು ಮಾತ್ರ)

ಸಿ) ರಾಜ್ಯ ಸರ್ಕಾರದ ಹಿರಿಯ ದರ್ಜೆ 'ಎ' ಸಮೂಹದ ಅಧಿಕಾರಿಗೆ ಅನ್ವಯವಾಗುವಂಥ ಪ್ರಯಾಣ ಭತ್ಯೆ ಮತ್ತು ದಿನ ಭತ್ಯೆ, ಸದಸ್ಯರುಗಳ ಪ್ರವಾಸಗಳು ಆಯೋಗದ ಪ್ರಕಾರ್ಯಗಳಿಗೆ ಸಂಬಂಧಿಸಿದಂತೆ ಇರತಕ್ಕದ್ದು.

ಡಿ) ಅಧ್ಯಕ್ಷರು ಮತ್ತು ಸದಸ್ಯರು ಅಗತ್ಯವಿದ್ದರೆ ರಾಜ್ಯ ಸರ್ಕಾರದ ಪೂರ್ವಾನುಮೋದನೆಯೊಂದಿಗೆ ರಾಜ್ಯ ಮತ್ತು ದೇಶದ ಹೊರಗೆ ಪ್ರವಾಸಗಳನ್ನು ಕೈಗೊಳ್ಳಬಹುದು.

ಇ) ಆಯೋಗದ ಅಧ್ಯಕ್ಷರು ಮತ್ತು ಸದಸ್ಯರ ಅಧಿಕೃತ ಪ್ರವಾಸಗಳು ತಿಂಗಳಿಗೆ ಹತ್ತುದಿನಗಳಿಗೆ ಸೀಮಿತವಾಗಿರತಕ್ಕದ್ದು.

**4. ಖಾಯಂ ಅಥವಾ ತಾತ್ಕಾಲಿಕ ಹುದ್ದೆಗಳ ಸಂದರ್ಭದಲ್ಲಿ ಏರ್ಪಾಟು:–**

ಅಧ್ಯಕ್ಷರ ಸ್ಥಾನವು ಖಾಲಿ ಉಂಟಾದರೆ ಅಥವಾ ಯಾವುದೇ ಕಾರಣಕ್ಕೆ ಅಧ್ಯಕ್ಷರು ಗೈರುಹಾಜರಾದರೆ ಅಥವಾ ತನ್ನ ಸ್ಥಾನದ ಕರ್ತವ್ಯಗಳನ್ನು ನಿರ್ವಹಿಸಲು ಅಸಮರ್ಥನಾದರೆ, ಅಂಥ ಕರ್ತವ್ಯಗಳನ್ನು ಸದಸ್ಯನು ಹೊಸ ಅಧ್ಯಕ್ಷರು ತನ್ನ ಸ್ಥಾನದ ಅಧಿಕಾರವನ್ನು ಸ್ವೀಕರಿಸುವ ತನಕ ಅಥವಾ ಸಂದರ್ಭಾನುಸಾರ ಅಧ್ಯಕ್ಷರು ತನ್ನ ಅಧಿಕಾರ ಸ್ವೀಕರಿಸುವವರೆಗೂ ಸರ್ಕಾರವು ನಿರ್ದೇಶಿಸಬಹುದಾದಂತೆ ನಿರ್ವಹಿಸತಕ್ಕದ್ದು.

**5. ಜವಾಬ್ದಾರಿಗಳ ವಿಭಜನೆ ಮತ್ತು ಕೆಲಸಗಳ ಹಂಚಿಕೆ:–**

1) ಅಧ್ಯಕ್ಷರು ಆಯೋಗದ ಮುಖ್ಯಸ್ಥರಾಗಿರತಕ್ಕದ್ದು ಮತ್ತು ಇಂತಹ ವಿಷಯಗಳಲ್ಲಿ ನಿರ್ದಿಷ್ಟ ಉಪಬಂಧವನ್ನು ಈ ನಿಯಮಗಳಲ್ಲಿ ರಚಿಸಿದ ಹೊರತು ಆಯೋಗದಲ್ಲಿ ಉದ್ಭವಿಸುವ ಎಲ್ಲ ವಿವಾದಗಳು ಮತ್ತು ವಿಷಯಗಳ ಮೇಲೆ ನಿರ್ಣಯಕೈಗೊಳ್ಳುವ ಅಧಿಕಾರಗಳ ಉತ್ತರದಾಯತ್ವವನ್ನು ಹೊಂದಿರತಕ್ಕದ್ದು.

2) ಅಧ್ಯಕ್ಷರು, ಆಯೋಗದ ಸದಸ್ಯರುಗಳಿಗೆ ವಿಷಯಗಳು / ಪ್ರದೇಶಗಳು ಮತ್ತು ಜವಾಬ್ದಾರಿಗಳನ್ನು ಹಂಚತಕ್ಕದ್ದು. ವಿಷಯಗಳು / ಪ್ರದೇಶಗಳು ಮತ್ತು ಜವಾಬ್ದಾರಿಗಳನ್ನು ಹಂಚಿಕೆ ಮಾಡುವ ಆದೇಶವನ್ನು ಸಂಬಂಧಪಟ್ಟವರಿಗೆಲ್ಲಾ ಆಯೋಗದ ಸದಸ್ಯ ಕಾರ್ಯದರ್ಶಿ ಅಥವಾ ಅಧಿಕೃತ ಅಧಿಕಾರಿಯ ಮೂಲಕ ತಿಳಿಸತಕ್ಕದ್ದು.

3) ಅಧ್ಯಕ್ಷರು, ಸದಸ್ಯರ ರಜೆಯನ್ನು ಮಂಜೂರು ಮಾಡಲು ಮತ್ತು ಪ್ರವಾಸಗಳಿಗೆ ಅನುಮೋದನೆ ನೀಡಲು ಅಧಿಕಾರ ಹೊಂದಿರತಕ್ಕದ್ದು.

4) ಅಧ್ಯಕ್ಷರು, ಆಯೋಗದ ಸಭೆಗಳ ಅಧ್ಯಕ್ಷತೆವಹಿಸತಕ್ಕದ್ದು.

5) ಸದಸ್ಯರುಗಳಿಗೆ ಹಂಚಿಕೆಯಾದ ವಿಷಯಗಳಿಗೆ ಸಂಬಂಧಿಸಿದಂತೆ ಆಯೋಗದ ಎಲ್ಲ ಪ್ರಮುಖ ತೀರ್ಮಾನಗಳನ್ನು ಅಧ್ಯಕ್ಷರ ಅನುಮೋದನೆಯೊಂದಿಗೆ ತೆಗೆದುಕೊಳ್ಳತಕ್ಕದ್ದು.

6) ಅಧ್ಯಕ್ಷರು, ತಾನು ಪ್ರಮುಖವೆಂದು ಪರಿಗಣಿಸುವ ಯಾವುದೇ ವಿಷಯಕ್ಕೆ ಸಂಬಂಧಿಸಿದಂತೆ ಯಾವುದೇ ದಾಖಲೆಗಳನ್ನು ಕೇಳಬಹುದು ಮತ್ತು ಈ ಬಗ್ಗೆ ಆಯೋಗದ ಸಭೆಗಳಲ್ಲಿ ಮಂಡಿಸಿ ತೀರ್ಮಾನವನ್ನು ಕೈಗೊಳ್ಳಬಹುದು.

7) ಆಯೋಗದ ಸದಸ್ಯರು ಆಯೋಗದ ಸಾಮೂಹಿಕ ಜವಾಬ್ದಾರಿಗಳನ್ನು ಹೊಂದಿರತಕ್ಕದ್ದು ಮತ್ತು ಆಯೋಗದ ಸಭೆಗಳಲ್ಲಿ ಭಾಗವಹಿಸುವ ಮತ್ತು ಹಾಜರಾಗುವ ಮೂಲಕ ಮತ್ತು ಅವರಿಗೆ ಹಂಚಿಕೆಯಾದ ವಿಷಯಗಳು / ಪ್ರದೇಶಗಳನ್ನು ಪರಿಶೀಲಿಸುವ ಮೂಲಕ ಕಾರ್ಯ ನಿರ್ವಹಿಸತಕ್ಕದ್ದು. ಸದಸ್ಯನು ಪ್ರಮುಖ ಕ್ರಮಗಳು ಮತ್ತು ತೀರ್ಮಾನವನ್ನು ಯಾವ ವಿಷಯದ ಬಗೆಗೆ ಪರಿಷ್ಕರಣೆ ಮಾಡಬೇಕಾಗಿದೆಯೋ ಅದನ್ನು ಆಯೋಗದ ಸಭೆಯಲ್ಲಿ ಮಂಡಿಸಬಹುದು.

8) ಯಾರೇ ಸದಸ್ಯ, ಆಯೋಗದ ಸಭೆಗಳಲ್ಲಿ ಯಾವುದೇ ವಿಷಯಗಳನ್ನು ಸೇರಿಸಲು ಸಲಹೆ ನೀಡಬಹುದು ಮತ್ತು ಅದು ಆಯೋಗದ ತೀರ್ಮಾನಗಳಿಗಾಗಿ ಸಹ ಸೇರಿಸತಕ್ಕದ್ದು.

9) ಪ್ರತಿಯೊಬ್ಬ ಸದಸ್ಯನು ತಮಗೆ ಹಂಚಿಕೆಯಾಗಬಹುದಾದ ವಿಷಯ ಮತ್ತು / ಅಥವಾ ಪ್ರದೇಶಗಳ ಪೂರ್ಣ ಜವಾಬ್ದಾರಿಯನ್ನು ಹೊಂದಿರತಕ್ಕದ್ದು.

10) ಒಬ್ಬರು ಅಥವಾ ಹೆಚ್ಚಿನ ಸದಸ್ಯರು, ಈ ನಿಯಮಗಳಲ್ಲಿ ನಿರ್ದಿಷ್ಟ ಪಡಿಸಿದ ಪ್ರಕ್ರಿಯೆಗಳಿಗನುಸಾರ ಆಯೋಗದಿಂದ ತನಿಖೆ ಅಥವಾ ವಿಚಾರಣೆ ಮೇರೆಗೆ ಯಾವುದೇ ವಿಷಯ / ವಿವಾದ / ಪ್ರಕರಣದ ಬಗ್ಗೆ ಸಾಕ್ಷ್ಯ ಅಥವಾ ಮಾಹಿತಿ ಸಂಗ್ರಹಿಸಲು ಅಥವಾ ಪ್ರಕರಣಗಳ ವಿಚಾರಣೆಗೆ ಆಯೋಗದ ಸಭೆಗಳನ್ನು ನಡೆಸಬಹುದು.

11) ಸದಸ್ಯರುಗಳು ಪ್ರವಾಸಗಳು ಮತ್ತು ಪ್ರಯಾಣಗಳು ಒಳಗೊಂಡಂತೆ ಎಲ್ಲ ವಿಷಯಗಳಲ್ಲಿ ಆಯೋಗದ ಸಿಬ್ಬಂದಿಯಿಂದ ನೆರವು ಹೊಂದತಕ್ಕದ್ದು.

**ಅಧ್ಯಾಯ – III**

**6. ಆಯೋಗದ ಸಿಬ್ಬಂದಿ**

(1) ಆಯೋಗದಲ್ಲಿನ ಹುದ್ದೆಗಳನ್ನು ಯಾವುದೇ ರಾಜ್ಯ ಸಿವಿಲ್ ಸೇವೆಗಳು / ವಿಶ್ವವಿದ್ಯಾನಿಲಯಗಳು / ಸ್ಥಳೀಯ ಪ್ರಾಧಿಕಾರಗಳು / ಸಾರ್ವಜನಿಕ ವಲಯ / ಉದ್ಯಮಗಳು / ಶಾಸನಬದ್ದ ಮಂಡಳಿಗಳು / ನಿಗಮಗಳ ತತ್ಸಮಾನ ವೇತನಶ್ರೇಣಿಗಳು ಮತ್ತು ದರ್ಜೆಯನ್ನು ಹೊಂದಿರುವ ಅಧಿಕಾರಿಗಳು / ನೌಕರರನ್ನು ಪ್ರತಿನಿಯೋಜನೆ ಮೂಲಕ ಅಥವಾ ಮೇಲಿನ ಯಾವುದೇ ಸೇವೆಗಳಿಂದ ನಿವೃತ್ತಿ ಹೊಂದಿದ ಅಥವಾ ವಯೋನಿವೃತ್ತಿ ಹೊಂದಿದ ವ್ಯಕ್ತಿಗಳನ್ನು ಗುತ್ತಿಗೆ ಆಧಾರದ ಮೇಲೆ ನೇಮಕಾತಿ ಮೂಲಕ ಭರ್ತಿ ಮಾಡತಕ್ಕದ್ದು.

(2) ಪ್ರತಿನಿಯೋಜನೆಯ ಮೇಲಿನ ನೇಮಕಗಳು ಕರ್ನಾಟಕ ಸಿವಿಲ್ (ಸಾಮಾನ್ಯ ನೇಮಕಾತಿ) ನಿಯಮಗಳು 1977ರ ಉಪಬಂಧಗಳು ಮತ್ತು ತತ್ಕಾಲದಲ್ಲಿ ಜಾರಿಯಲ್ಲಿರುವ ಸರ್ಕಾರದ ಯಾವುದೇ ಇತರ ಆದೇಶಗಳಿಗನುಸಾರವಾಗಿ ಇರತಕ್ಕದ್ದು.

(3) ಸದಸ್ಯ ಕಾರ್ಯದರ್ಶಿಯು ಆಯೋಗದ ಆಡಳಿತ ವಿಭಾಗದ ಮುಖ್ಯಸ್ಥರಾಗಿರತಕ್ಕದ್ದು ಮತ್ತು ಆಯೋಗದ ಸಿಬ್ಬಂದಿಯ ನೆರವಿನೊಂದಿಗೆ ತನ್ನ ಪ್ರಕಾರ್ಯಗಳ ನಿರ್ವಹಣೆಗಾಗಿ ಆಯೋಗಕ್ಕೆ ನೆರವು ನೀಡತಕ್ಕದ್ದು.

(4) ಎಲ್ಲ ಪ್ರಮುಖ ಆಡಳಿತಾತ್ಮಕ ವಿಷಯಗಳನ್ನು ಸದಸ್ಯ ಕಾರ್ಯದರ್ಶಿಯ ಮುಂದೆ ಇಡತಕ್ಕದ್ದು. ಇವರು ಅಂಥ ವಿಷಯಗಳ ಮೇಲೆ ಸಾಮಾನ್ಯ ಅಥವಾ ವಿಶೇಷ ಆದೇಶಗಳನ್ನು ಹೊರಡಿಸಬಹುದು.

(5) ಸದಸ್ಯ ಕಾರ್ಯದರ್ಶಿಯು ಆಯೋಗದ ಸಭೆಗಳಿಗಾಗಿ ಸೂಚಿ ಪಟ್ಟಿಯನ್ನು ತಯಾರಿಸಬೇಕು ಮತ್ತು ನಡಾವಳಿಯನ್ನು ತಿಳಿಸಲು ಜವಾಬ್ದಾರನಾಗಿರತಕ್ಕದ್ದು.

(6) ಸದಸ್ಯ ಕಾರ್ಯದರ್ಶಿಯವರ ವರದಿಗಳನ್ನು ಅಂತಿಮಗೊಳಿಸಲು ಆಯೋಗಕ್ಕೆ ನೆರವು ನೀಡತಕ್ಕದ್ದು.

(7) ಸದಸ್ಯ ಕಾರ್ಯದರ್ಶಿಯು ತನ್ನ ವಿವೇಚನೆಯ ಅನುಸಾರ, ಆಯೋಗದ ಅಧೀನ ಸಿಬ್ಬಂದಿಗೆ ತನ್ನ ಯಾವುದೇ ಪ್ರಕಾರ್ಯಗಳ ಅಥವಾ ಅಧಿಕಾರವನ್ನು ಪ್ರತ್ಯಾಯೋಜಿಸಬಹುದು.

## ಅಧ್ಯಾಯ – IV

**7. ಆಯೋಗದ ಸಭೆಗಳು:–** (1) ಆಯೋಗವು, ಬೆಂಗಳೂರಿನಲ್ಲಿ ಅಥವಾ ಅವಶ್ಯವೆನಿಸಿದಾಗ ಅಧ್ಯಕ್ಷರು ಸೂಕ್ತವೆಂದು ಭಾವಿಸಬಹುದಾದ ರಾಜ್ಯದ ಅಂಥ ಇತರ ಸ್ಥಳಗಳಲ್ಲಿ ಸಭೆ ಸೇರತಕ್ಕದ್ದು.

ಪರಂತು, ಆಯೋಗವು ಒಂದು ತಿಂಗಳಲ್ಲಿ ಕನಿಷ್ಠ ಒಂದು ಬಾರಿ ಯಾದರೂ ಸಭೆ ಸೇರತಕ್ಕದ್ದು.

(2) ಆಯೋಗವು, ತಾನು ಸೂಕ್ತ ಎಂದು ಭಾವಿಸಿದಂತೆ ತನ್ನ ಕಾರ್ಯವಿಧಾನಗಳನ್ನು ವಿನಿಯಮನಗೊಳಿಸಲು ಅಧಿಕಾರ ಹೊಂದಿರತಕ್ಕದ್ದು.

(3) ಆಯೋಗದ ಎಲ್ಲ ಆದೇಶಗಳು ಮತ್ತು ತೀರ್ಮಾನಗಳನ್ನು ಸದಸ್ಯ ಕಾರ್ಯದರ್ಶಿ ಅಥವಾ ಸದಸ್ಯ ಕಾರ್ಯದರ್ಶಿಯು ಈ ಸಂಬಂಧ ಯುಕ್ತವಾಗಿ ಅಧಿಕೃತಗೊಳಿಸಿದ ಆಯೋಗದ ಯಾರೇ ಇತರ ಅಧಿಕಾರಿಯ ಮೂಲಕ ಅಧಿಪ್ರಮಾಣಗೊಳಿಸತಕ್ಕದ್ದು.

(4) ಅಧ್ಯಕ್ಷರು, ಸಾಮಾನ್ಯವಾಗಿ ಬೆಂಗಳೂರಿನಲ್ಲಿ ಸಭೆ ನಡೆಸಲು ಉದ್ದೇಶಿಸಿರುವಾಗ ಕನಿಷ್ಠ ಮೂರು ಕೆಲಸದ ದಿನಗಳ ನೋಟೀಸನ್ನು ನೀಡತಕ್ಕದ್ದು ಮತ್ತು ಆಯೋಗದ ಸಭೆಗಳು ಬೆಂಗಳೂರಿನ ಹೊರ ಸ್ಥಳಗಳಲ್ಲಿ ನಡೆದರೆ ಕನಿಷ್ಠ ಏಳು ದಿನಗಳ ಮುಂಚಿತವಾಗಿ ನೋಟೀಸನ್ನು ಸದಸ್ಯರಿಗೆ ನೀಡತಕ್ಕದ್ದು. ತುರ್ತು ಸಭೆಗಳು ನಡೆಯುವ ಸಂದರ್ಭದಲ್ಲಿ, ಆಯೋಗವು ತುರ್ತಾಗಿ ಪರಿಗಣಿಸುವ ಪ್ರಮುಖ ವಿಷಯಗಳನ್ನು ವಿಲೆ ಮಾಡಲು ಅಧ್ಯಕ್ಷರು ಸ್ವತ: ಅಥವಾ ಸದಸ್ಯರ ಅಥವಾ ಸದಸ್ಯ ಕಾರ್ಯದರ್ಶಿಯವರ ಕೋರಿಕೆಯ ಮೇರೆಗೆ ಆಯೋಗವು ತುರ್ತು ಪರಿಗಣನೆಯ ಅಗತ್ಯ ಪ್ರಮುಖ ವಿಷಯಗಳ ವಿಲೆಗಾಗಿ ಸಹ ಸಭೆ ಕರೆಯತಕ್ಕದ್ದು.

(5) ಆಯೋಗದ ಸಭೆಯ ಕೋರಂ ಅಧ್ಯಕ್ಷರು ಸೇರಿದಂತೆ 2 ಆಗಿರತಕ್ಕದ್ದು, ಪರಂತು ಹಾಗೆ ಗೊತ್ತುಪಡಿಸಿದ ಕೋರಂ ಆಯೋಗದಲ್ಲಿ ಖಾಲಿ ಸ್ಥಾನಗಳಿದ್ದಾಗ ಆಯೋಗದಲ್ಲಿರುವ ಅಂಥ ಖಾಲಿ ಸ್ಥಾನಗಳ ಸಂಖ್ಯೆಯಷ್ಟು ಕಡಿಮೆಗೊಳಿಸತಕ್ಕದ್ದು.

(6) ಆಯೋಗದ ಪ್ರತಿಯೊಂದು ತೀರ್ಮಾನವು ಹಾಜರಿರುವ ಸದಸ್ಯರ ಬಹುಮತ ಮತ್ತು ಮತದಾನದ ಮೂಲಕ ತೀರ್ಮಾನಿಸತಕ್ಕದ್ದು.

ಪರಂತು, ಮತಗಳು ಸಮವಾಗಿ ಬಂದ ಸಂದರ್ಭದಲ್ಲಿ, ಅಧ್ಯಕ್ಷರು ನಿರ್ಣಾಯಕ ಮತವನ್ನು ಚಲಾಯಿಸಬಹುದು.

(7) ಆಯೋಗವು ವಿರುದ್ಧವಾದ ತೀರ್ಮಾನಗಳಿಗೆ ಸಂಬಂಧ, ಆಯೋಗದ ಸಭೆಯ ನಡಾವಳಿಯನ್ನು ಸದಸ್ಯ ಕಾರ್ಯದರ್ಶಿಯು ದಾಖಲೆ ಮಾಡತಕ್ಕದ್ದು ಮತ್ತು ಅವನು ಸದರಿ ನಡಾವಳಿಗಳ ಪ್ರತಿಗಳನ್ನು ತಯಾರಿಸತಕ್ಕದ್ದು ಮತ್ತು ಅದನ್ನು ಸಭೆಯು ಮುಕ್ತಾಯವಾದ ಸಾಧ್ಯವಾದಷ್ಟು ಬೇಗನೆ ಅಧ್ಯಕ್ಷರು ಮತ್ತು ಸದಸ್ಯರಿಗೆ ತಿಳಿಸತಕ್ಕದ್ದು. ಅವನು, ಮುಂದಿನ ಸಭೆಯಲ್ಲಿ ಅಧ್ಯಕ್ಷರ ಸಹಿಗಾಗಿ ನಡಾವಳಿಗಳನ್ನು ಹಾಜರುಪಡಿಸತಕ್ಕದ್ದು, ಅಧ್ಯಕ್ಷರು ಸಹಿಮಾಡಿದ ನಂತರ, ಸಭೆಯ ನಡೆವಳಿಕೆಗಳು ಊರ್ಜಿತವಾಗತಕ್ಕದ್ದು.

(8) ಸಭೆಯ ನಡಾವಳಿಗಳನ್ನು ದಾಖಲಿಸಲು ಅದರ ಸರಿತನದ ಬಗ್ಗೆ ಯಾವುದೇ ಆಕ್ಷೇಪಣೆ ಇದ್ದರೆ ಆಯೋಗದ ಮುಂದೆ ಸಭೆಯಲ್ಲಿ ಚರ್ಚೆಗಾಗಿ ಕೈಗೊಳ್ಳಬಹುದು ಮತ್ತು ಆಯೋಗವು ತೀರ್ಮಾನಿಸತಕ್ಕದ್ದು.

(9) ಸದಸ್ಯ ಕಾರ್ಯದರ್ಶಿಯು ವ್ಯವಹರಣೆಗಳ ದಾಖಲೆಯನ್ನು ಇಟ್ಟುಕೊಳ್ಳತಕ್ಕದ್ದು ಮತ್ತು ಸದಸ್ಯರುಗಳು ಮತ್ತು ಅಧ್ಯಕ್ಷರಿಗೆ ಅವುಗಳ ಪ್ರಮಾಣೀಕರಿಸಿದ ಜೆರಾಕ್ಸ್ ಪ್ರತಿಯನ್ನು ಒದಗಿಸತಕ್ಕದ್ದು. ಅಧ್ಯಕ್ಷರು ತಮ್ಮ ವಿವೇಚನಾನುಸಾರ ಆಯೋಗದ ಸಭೆಯ ಪೂರ್ಣ ವ್ಯವಹರಣೆಗಳನ್ನು ಲಿಖಿತದಲ್ಲಿ ಅಧಿಕೃತಗೊಳಿಸಿದ ಹೊರತು ಸಂಬಂಧಪಟ್ಟ ಎಲ್ಲರು ನಡಾವಳಿಗಳನ್ನು ರಹಸ್ಯವಾಗಿ ಇಟ್ಟಿರತಕ್ಕದ್ದು.

**8. ಆಯೋಗವು ತನ್ನ ಸಭೆಗಳಲ್ಲಿ ನಿರ್ಣಯಗಳನ್ನು ಕೈಗೊಳ್ಳಬೇಕಾಗಿರುವ ವಿಷಯಗಳು:–** ಈ ಮುಂದಿನ ವಿಷಯಗಳನ್ನು ಆಯೋಗದ ಸಭೆಯಲ್ಲಿ;

i. ಅಧಿನಿಯಮಕ್ಕೆ ಅಥವಾ ಕಾರ್ಯವಿಧಾನಕ್ಕೆ ಸಂಬಂಧಪಟ್ಟ ಈ ನಿಯಮಗಳಿಗೆ ಯಾವುದೇ ತಿದ್ದುಪಡಿ;

ii. ಆಯೋಗವು ನೇರವಾಗಿ ತನಿಖೆ ಮಾಡಬೇಕಾದ ಅಥವಾ ವಿಚಾರಣೆ ಮಾಡಬೇಕಾದ ವಿಷಯಗಳು;

iii. ಈ ನಿಯಮಗಳಲ್ಲಿ ಉಪಬಂಧಿಸಿದಂತೆ ಆಯೋಗವು ಪರಿಗಣಿಸಲು ಅಗತ್ಯಪಡಿಸಿದಂತೆ ಎಲ್ಲ ವರದಿಗಳು;

iv. ಅಧ್ಯಕ್ಷರ ಅನುಮತಿಯೊಂದಿಗೆ, ಸದಸ್ಯನು ಸಭೆ ಮುಂದೆ ಮಂಡಿಸಲು ಇಚ್ಛಿಸಿದಂತ ಯಾವುದೇ ವಿಷಯಗಳು;

v. ಅನುಸೂಚಿತ ಜಾತಿಗಳು ಮತ್ತು ಅನುಸೂಚಿತ ಪಂಗಡಗಳ ಕ್ಷೇಮಾಭಿವೃದ್ಧಿ ಮತ್ತು ಪ್ರಗತಿಗಾಗಿ ಸುರಕ್ಷಾ ಕ್ರಮಗಳು ಮತ್ತು ಅಭಿವೃದ್ಧಿಗೆ ಸಂಬಂಧಿಸಿದ ಪ್ರಮುಖ ವಿಷಯಗಳು;

vi. ಅಧ್ಯಕ್ಷರು, ಆಯೋಗದ ಸಭೆಯಲ್ಲಿ ಮಂಡಿಸಬೇಕೆಂದು ನಿರ್ದೇಶಿಸಬಹುದಾದಂಥ ಯಾವುದೇ ವಿಷಯ;

– ಪರಿಗಣನೆ ಮತ್ತು ತೀರ್ಮಾನಕ್ಕೆ ಮಂಡಿಸತಕ್ಕದ್ದು.

**9. ಸಭೆಯ ಕಾರ್ಯಸೂಚಿ:–** ಕಾರ್ಯಸೂಚಿಯನ್ನು ಸಾಮಾನ್ಯವಾಗಿ ಸಭೆಯ ಮೊದಲು ಕನಿಷ್ಠ 3 ದಿನಗಳ ಮುಂಚಿತವಾಗಿ ಎಲ್ಲ ಸದಸ್ಯರಿಗೆ ರವಾನಿಸತಕ್ಕದ್ದು.

ಪರಂತು, ತುರ್ತು ಸಭೆಗೆ ಕಾಲಮಿತಿಯು ಅನ್ವಯವಾಗುವುದಿಲ್ಲ. ಸಭೆಯ ನಡಾವಳಿಗಳನ್ನು ಸಾಧ್ಯವಾದಷ್ಟು ಬೇಗನೆ ಎಲ್ಲ ಸದಸ್ಯರಿಗೆ ರವಾನಿಸತಕ್ಕದ್ದು.

## ಅಧ್ಯಾಯ – V

**10. ಆಯೋಗದಿಂದ ತನಿಖೆ ಮತ್ತು ವಿಚಾರಣೆ:–** (1) ಆಯೋಗವು, ಅನುಸೂಚಿತ ಜಾತಿಗಳು ಮತ್ತು ಅನುಸೂಚಿತ ಪಂಗಡಗಳ ಸುರಕ್ಷತೆಗಳು, ರಕ್ಷಣೆ, ಕ್ಷೇಮಾಭಿವೃದ್ಧಿ ಮತ್ತು ಅಭಿವೃದ್ಧಿಗೆ ಸಂಬಂಧಿಸಿದ ವಿಷಯಗಳನ್ನು ತನಿಖೆ ಮಾಡಲು ಅಥವಾ ಆಯೋಗವು ನೇರವಾಗಿ ತನಿಖೆ ಅಥವಾ ವಿಚಾರಣೆ ನಡೆಸಲು

ತೀರ್ಮಾನಿಸಿದೆಯೋ ಆ ನಿರ್ದಿಷ್ಟ ದೂರುಗಳ ವಿಚಾರಣೆಗಾಗಿ ಸಭೆಗಳನ್ನು ನಡೆಸಬಹುದು. ಅಂಥ ಉಪವೇಶನಗಳನ್ನು ಆಯೋಗದ ಕೇಂದ್ರ ಸ್ಥಳದಲ್ಲಾಗಲಿ ಅಥವಾ ರಾಜ್ಯದ ಯಾವುದೇ ಇತರ ಸ್ಥಳದಲ್ಲಾಗಲಿ ನಡೆಸಬಹುದು.

(2) ಆಯೋಗದ ಸಭೆಗಳನ್ನು ವಿಚಾರಣೆ ನಡೆಸಲು ಉದ್ದೇಶಿಸಿದ ಪಕ್ಷಕಾರರಿಗೆ ಯುಕ್ತ ನೋಟೀಸನ್ನು ನೀಡಿದ ನಂತರ ನಡೆಸತಕ್ಕದ್ದು ಮತ್ತು ಅಗತ್ಯವಿದ್ದರೆ ಸಾರ್ವಜನಿಕರಿಗೆ ಮುಂಚಿತವಾಗಿ ಪ್ರಚಾರದ ನೋಟೀಸನ್ನು ಸಹ ನೀಡತಕ್ಕದ್ದು. ಸಂದರ್ಭಾನುಸಾರ ನೋಟೀಸು ಅಥವಾ ಪ್ರಚಾರದ ಮೂಲಕ ವಿಚಾರಣೆ ನಡೆಯುತ್ತಿರುವ ವಿಷಯದಲ್ಲಿ ನೋಟೀಸು ಅಥವಾ ಮುಂಚಿತವಾಗಿ ಮಾಹಿತಿ ನೀಡಿ ತನಿಖೆ ಅಥವಾ ವಿಚಾರಣೆ ಮೇರೆಗಿನ ವಿಷಯಗಳಲ್ಲಿ ಬಾಧಿತರಾಗಿರುವಂಥ ಅನುಸೂಚಿತ ಜಾತಿಗಳು ಅಥವಾ ಅನುಸೂಚಿತ ಪಂಗಡಗಳ ಸದಸ್ಯರ ಬಗ್ಗೆ ಎಚ್ಚರಿಕೆ ವಹಿಸತಕ್ಕದ್ದು.

(3) ನೇರ ತನಿಖೆ ಅಥವಾ ವಿಚಾರಣೆಗಾಗಿ ತೀರ್ಮಾನ ಕೈಗೊಂಡಾಗ, ಅಗತ್ಯ ಸಿಬ್ಬಂದಿಯನ್ನು, ಅಂಥ ತನಿಖೆ ಅಥವಾ ವಿಚಾರಣೆಯನ್ನು ವಹಿಸಿಕೊಂಡಿರುವ ಸದಸ್ಯ(ರು)ಗೆ ನೀಡತಕ್ಕದ್ದು ಮತ್ತು ಅವರು ಅಂಥ ಸಭೆಗಳನ್ನು ವ್ಯವಸ್ಥೆಗೊಳಿಸಲು ಎಲ್ಲ ಕ್ರಮಗಳನ್ನು ತೆಗೆದುಕೊಳ್ಳತಕ್ಕದ್ದು.

(4) ತನಿಖೆ ಅಥವಾ ವಿಚಾರಣೆಯು ನಡೆಯುವ ಅವಧಿಯಲ್ಲಿ ಆಯೋಗವು, ಪ್ರಮಾಣವಚನ ಅಥವಾ ಶಪಥ ಪತ್ರಗಳ ಮೇಲೆ ಸಾಕ್ಷ್ಯವನ್ನು ಪಡೆಯಬಹುದು, ಆಯೋಗವು ಅವಶ್ಯವೆಂದು ಪರಿಗಣಿಸಿದರೆ ತನಿಖೆ ಅಥವಾ ವಿಚಾರಣೆಯಲ್ಲಿ ಸಾಕ್ಷ್ಯವನ್ನು ತೆಗೆದುಕೊಳ್ಳುವ ಉದ್ದೇಶಕ್ಕಾಗಿ, ಅವಶ್ಯಕವೆಂದು ಪರಿಗಣಿಸುವಾಗ ಯಾರೇ ವ್ಯಕ್ತಿಯ ಖುದ್ದು ಹಾಜರಿಯನ್ನು ಅಗತ್ಯ ಪಡಿಸಬಹುದು ಮತ್ತು ಅವನಿಗೆ ಸಮನ್‌ಗಳನ್ನು ಜಾರಿಗೊಳಿಸಬಹುದು, ಸಮನ್‌ಗಳನ್ನು ಸ್ವೀಕರಿಸಿದ ದಿನಾಂಕದಿಂದ ಆಯೋಗದ ಮುಂದೆ ಹಾಜರಾಗಬೇಕೆಂದು ನಿರ್ದೇಶಿಸಿದ ವ್ಯಕ್ತಿಗೆ ಕನಿಷ್ಠ ಏಳುದಿನಗಳ ನೋಟೀಸಿನ ಸಮನ್‌ಗಳನ್ನು ಒದಗಿಸತಕ್ಕದ್ದು.

(5) ಅನುಸೂಚಿತ ಜಾತಿಗಳು ಮತ್ತು ಅನುಸೂಚಿತ ಪಂಗಡಗಳು ಮತ್ತು ಸಂಬಂಧಿಸಿದ ಇತರ ವಿಷಯಗಳ ಸ್ವತ್ತು, ಸೇವೆ ಅಥವಾ ಉದ್ಯೋಗದ ಸಂಬಂಧ ತಕ್ಷಣ ಬೆದರಿಕೆ ಇರುವಾಗ ಮತ್ತು ಆಯೋಗವು ವಿವಾದಾಂಶವನ್ನು ಕೈಗೊಂಡಿದೆ ಎಂದು ಅವರಿಗೆ ತಿಳಿಸಲು ಸಂಬಂಧಪಟ್ಟ ಪ್ರಾಧಿಕಾರಕ್ಕೆ ಟೆಲೆಕ್ಸ್ ಮತ್ತು ಫ್ಯಾಕ್ಸ್ ಅಥವಾ ಇ–ಮೇಲ್ ಮೂಲಕ ಸೂಚನೆ ನೀಡಿ ಸಂಜ್ಞೇಯತೆಯನ್ನು ತೆಗೆದುಕೊಳ್ಳತಕ್ಕದ್ದು. ಟೆಲಿಗ್ರಾಮ್ ಅಥವಾ ಫ್ಯಾಕ್ಸ್ ಅಥವಾ ಇ–ಮೇಲ್ ತುರ್ತು ಪ್ರತ್ಯುತ್ತರವನ್ನು ಸಂಬಂಧಪಟ್ಟ ಪ್ರಾಧಿಕಾರದಿಂದ ತರಿಸಿಕೊಳ್ಳತಕ್ಕದ್ದು. ಒಂದು ವಾರದೊಳಗೆ ಪತ್ರವನ್ನು ಸ್ವೀಕರಿಸದ ಸಂದರ್ಭದಲ್ಲಿ ಸಂಬಂಧಪಟ್ಟ ಪ್ರಾಧಿಕಾರವು, ವಿಚಾರಣೆಗಾಗಿ ಶೀಘ್ರ ನೋಟೀಸಿನಲ್ಲಿ ಸಮನ್ ನೀಡತಕ್ಕದ್ದು.

(6) ಅಗತ್ಯಪಡಿಸಿದ ಸಭೆಗಳನ್ನು ನಡೆಸಿದ ನಂತರ, ತನಿಖೆಯನ್ನು ನಡೆಸಿದಂಥ ಸದಸ್ಯ(ರು) ವರದಿಯನ್ನು ಸಲ್ಲಿಸತಕ್ಕದ್ದು ಇದನ್ನು ಸದಸ್ಯಕಾರ್ಯದರ್ಶಿ ಅಥವಾ ವರದಿಯನ್ನು ಸ್ವೀಕರಿಸಲು ಅಧಿಕೃತಗೊಳಿಸಿದ ಯಾರೇ ಅಧಿಕಾರಿಗೆ ಕಳುಹಿಸತಕ್ಕದ್ದು. ಇದನ್ನು ಪರಿಶೀಲಿಸಿದ ತರುವಾಯ ಅಧ್ಯಕ್ಷರ ಅನುಮೋದನೆಯೊಂದಿಗೆ ವರದಿಯ ಬಗ್ಗೆ ಕ್ರಮವನ್ನು ಆರಂಭಿಸಬಹುದು. ವಾಸ್ತವಿಕ ಸಾಕ್ಷ್ಯದ ನೋಟೀಸು, ವಿಚಾರಣಾ ನೋಟೀಸು ಮತ್ತು ಸಾರ್ವಜನಿಕ ನೋಟೀಸು ಕ್ರಮವಾಗಿ ನಮೂನೆ I, II ಮತ್ತು III ರಲ್ಲಿ ಉಪಬಂಧಿಸಿದೆ.

**11. ಕೆಲವು ದಾಖಲೆಗಳನ್ನು ರಹಸ್ಯವಾಗಿಡುವುದು:–** ಆಯೋಗವು ಸಭೆಗಳಲ್ಲಿ ಅಥವಾ ಅನ್ಯಥಾ ತೀರ್ಮಾನಗಳ ಮೂಲಕ ಯಾವುದೇ ವಿಷಯದ ಮೇಲೆ ಮಾಡಲಾದ ಯಾವುದೇ ವರದಿಯ ಒಳಾಂಶಗಳನ್ನು ರಹಸ್ಯವಾಗಿ ಇಟ್ಟುಕೊಳ್ಳಬೇಕು ಮತ್ತು ಅಂಥ ವರದಿಯ ಸಂಬಂಧ ಅಧಿಕೃತಗೊಳಿಸಲಾದ ವ್ಯಕ್ತಿಯ ಹೊರತಾಗಿ ಯಾರೇ ವ್ಯಕ್ತಿಗೆ ಬಹಿರಂಗ ಪಡಿಸಬಾರದೆಂದು ನಿರ್ದೇಶಿಸಬಹುದು.

**12. ಕಾನೂನು ಕ್ರಮಗಳು:–** ಆಯೋಗವು, ಸಿವಿಲ್ ನ್ಯಾಯಾಲಯದ ಅಧಿಕಾರಗಳನ್ನು ಚಲಾಯಿಸುವ ಅನುಸರಣೆಯಲ್ಲಿ ಜಾರಿಗೊಳಿಸಲು ಅಗತ್ಯಪಡಿಸಿದಂಥ ಎಲ್ಲಾ ಸಮನ್‌ಗಳು ಹಾಗೂ ವಾರೆಂಟ್‌ಗಳು ನಿಯಮಿಸಲಾದ ನಮೂನೆಯಲ್ಲಿ ಇರತಕ್ಕದ್ದು ಹಾಗೂ ಆಯೋಗದ ಮೊಹರನ್ನು ಹೊಂದಿರತಕ್ಕದ್ದು. ಕಾನೂನು ಕ್ರಮಗಳ ಜಾರಿಗಾಗಿ ಅನ್ವಯವಾಗಬಹುದಾದ ಸಿವಿಲ್ ಪ್ರಕ್ರಿಯಾ ಸಂಹಿತೆಯ ಉಪಬಂಧಗಳನ್ನು ಆಯೋಗವು ಪಾಲಿಸತಕ್ಕದ್ದು.

**13. ಸಮನ್‌ಗಳು ಹಾಗೂ ವಾರಂಟುಗಳ ನಮೂನೆ:–** ಸಮನ್‌ಗಳು ಹಾಗೂ ವಾರಂಟುಗಳು ಕ್ರಮವಾಗಿ ನಮೂನೆ IV ಮತ್ತು V ರಲ್ಲಿ ಇರತಕ್ಕದ್ದು.

**14. ಪತ್ರಗಳು ಹಾಗೂ ನೋಟೀಸುಗಳ ಜಾರಿ:–** ಸಿವಿಲ್ ನ್ಯಾಯಾಲಯದ ಅಧಿಕಾರಗಳನ್ನು ಚಲಾಯಿಸದೆ ಜಾರಿಗೊಳಿಸಬೇಕಾದಂಥ ದಸ್ತಾವೇಜುಗಳು ಇತ್ಯಾದಿಗಳ ಸಲ್ಲಿಕೆಗೆ ಅಗತ್ಯವಿರುವ ಪತ್ರಗಳು ಹಾಗೂ ನೋಟೀಸುಗಳನ್ನು ಆಯೋಗವು ಒದಗಿಸಬಹುದು ಹಾಗೂ ಸದಸ್ಯ ಕಾರ್ಯದರ್ಶಿ ಅಥವಾ ಅಧಿಕೃತಗೊಳಿಸಲಾದ ಅಧಿಕಾರಿಯು ಸಹಿ ಮಾಡಿರಬೇಕು.

## ಅಧ್ಯಾಯ – VI

**15. ಆಯೋಗದ ಸಭೆಗಳು:–** (1) ಒಂದು ವಿಷಯವನ್ನು ಆಯೋಗವು ನೇರವಾಗಿ ತನಿಖೆ ಅಥವಾ ವಿಚಾರಣೆ ಮಾಡಬೇಕಾದಾಗ ಆಯೋಗದ ಸಭೆಗಳನ್ನು ನಡೆಸುವ ಮೂಲಕ ಹಾಗೆ ಮಾಡಬಹುದು. ಅಂಥ ಸಭೆಯ ಸಂದರ್ಭದಲ್ಲಿ ಎಲ್ಲಾ ಸದಸ್ಯರ ಹಾಜರಾತಿಯು ಅಗತ್ಯವಾಗಿರುವುದಿಲ್ಲ.

**(2) ಹಾಜರಿರಬೇಕಾದ ಅಧಿಕಾರಿಗಳು:–** ಒಬ್ಬ ಸದಸ್ಯನು ಸಭೆಯನ್ನು ನಡೆಸುವಾಗ, ಆಯೋಗದ ಅಧಿಕೃತ ಅಧಿಕಾರಿ ಅಥವಾ ಸದಸ್ಯ ಕಾರ್ಯದರ್ಶಿಯು ಪ್ರಕಾರ್ಯಗಳನ್ನು ಯುಕ್ತವಾಗಿ ಹಾಗೂ ಪ್ರಾಮಾಣಿಕವಾಗಿ ನಿರ್ವಹಣಾ ಸಭೆಯನ್ನು ನಡೆಸುವ ಸದಸ್ಯ(ರು)ಗೆ ನೆರವಾಗಲು ಹಾಜರಿರತಕ್ಕದ್ದು, ಸದಸ್ಯ(ರು) ವರದಿಯನ್ನು ಸಿದ್ಧಪಡಿಸಲು ಕೋರಿದರೆ ಅದನ್ನು ಸಿದ್ದಪಡಿಸಲು ಸದಸ್ಯರುಗಳಿಗೆ ನೆರವಾಗುವುದು. ಅಧಿಕೃತ ಅಧಿಕಾರಿಯ ಕರ್ತವ್ಯವಾಗಿರತಕ್ಕದ್ದು. ಕಾರ್ಯವಿಧಾನಗಳನ್ನು ಅನುಸರಿಸಲು ಸದಸ್ಯ(ರು)ಗೆ ನೆರವಾಗುವುದಕ್ಕೆ ಸಹ ಅಧಿಕಾರಿಯು ಜವಾಬ್ದಾರನಾಗಿರತಕ್ಕದ್ದು.

**(3) ಸಭೆಗಳ ಸಂಖ್ಯೆ:–** ಆಯೋಗದ ಸಭೆಗಳನ್ನು ಅಗತ್ಯವಿದ್ದಾಗಲೇ ನಡೆಸಬಹುದು. ಆಯೋಗವು ರಾಜ್ಯದ ವಿವಿಧ ಭಾಗಗಳಲ್ಲಿ ಪ್ರತ್ಯೇಕವಾಗಿ ಕಾರ್ಯನಿರ್ವಹಿಸುವ ವಿವಿಧ ಸದಸ್ಯರುಗಳೊಂದಿಗೆ ಏಕಕಾಲದಲ್ಲಿ ಒಂದಕ್ಕಿಂತ ಹೆಚ್ಚಿನ ಸಭೆಗಳನ್ನು ನಡೆಸಬಹುದು.

**(4) ಸಭೆಗಳ ಕಾರ್ಯಕ್ರಮ:–** ಸಭೆಗಳ ಕಾರ್ಯಕ್ರಮವನ್ನು ಕೇಂದ್ರ ಕಚೇರಿಗಳು ಹಾಗೂ ಇತರ ಸ್ಥಳಗಳೆರಡು ಕಡೆಗಳಲ್ಲಿ ಸಾಮಾನ್ಯವಾಗಿ ಮುಂಚಿತವಾಗಿ ಮತ್ತು ಯುಕ್ತವಾಗಿ ತಿಳಿಸಿ ಪ್ರತಿ ತಿಂಗಳು ನಡೆಸಬಹುದು.

**(5) ಸಾಕ್ಷಿದಾರರಿಗೆ ವೆಚ್ಚಗಳನ್ನು ಭರಿಸುವುದು:–** (1) ಆಯೋಗವು, ಸಭೆಯಲ್ಲಿ ಆಯೋಗದ ಮುಂದೆ ಹಾಜರಾಗಲು ಸಮನ್‌ಗಳ ಮೂಲಕ ಕರೆಯಲಾದಂಥ ವ್ಯಕ್ತಿಗಳಿಗೆ ಪ್ರಯಾಣವೆಚ್ಚಗಳನ್ನು ಭರಿಸಬಹುದು. ಪರಂತು. ವ್ಯಕ್ತಿಯ ವಾಸಸ್ಥಳವು. ಆಯೋಗದ ಸಭೆಯ ಸ್ಥಳದಿಂದ 8 ಕಿ.ಮೀ ಗಳಿಗಿಂತ ಹೆಚ್ಚಾಗಿರಬೇಕು. ಹಾಗೆ ಭರಿಸಲಾದ ಮೊತ್ತವು ವ್ಯಕ್ತಿಯು ಯಾವುದೇ ಇತರ ಮೂಲದಿಂದ ಪ್ರಯಾಣ ಮತ್ತು ದಿನಭತ್ಯಕ್ಕೆ ಹಕ್ಕುಳ್ಳವನಾಗಿಲ್ಲದಿದ್ದರೆ ವಾಸ್ತವಿಕ ಪ್ರಯಾಣ ವೆಚ್ಚಗಳು ಹಾಗೂ ವ್ಯಕ್ತಿಯು ಆಯೋಗದ ಸಭೆಯಲ್ಲಿ ಹಾಜರಾಗಿದ್ದ ದಿನಗಳ ಸಂಖ್ಯೆಗಳಿಗಾಗಿ ದಿನಭತ್ಯಕ್ಕೆ ಒಳಪಟ್ಟಿರತಕ್ಕದ್ದು ಮುಂದೆ

ಪ್ರಯಾಣವೆಚ್ಚಗಳ ಮಿತಿಯು ಆಯೋಗವು ನಿರ್ದಿಷ್ಟಪಡಿಸಬಹುದಾದ ದರಗಳ ಆಧಾರದ ಮೇಲೆ ಲೆಕ್ಕ ಹಾಕಲಾದ ರೈಲುದರ ಹಾಗೂ ರಸ್ತೆಯ ದೂರದ ಆಧಾರ ಮೇಲೆ ನಿರ್ಧರಿಸತಕ್ಕದ್ದು. ವ್ಯಕ್ತಿಗಳ ಅರ್ಹತೆಯ ಬಗ್ಗೆ ಯಾವುದೇ ಸಂದೇಹಗಳು ಇದ್ದ ಸಂದರ್ಭದಲ್ಲಿ, ಆಯೋಗದ ಸದಸ್ಯ ಕಾರ್ಯದರ್ಶಿಯ ನಿರ್ಣಯವು ಅಂತಿಮವಾಗಿರತಕ್ಕದ್ದು.

(2) ಸರ್ಕಾರಿ / ಸಾರ್ವಜನಿಕ ವಲಯ ಉದ್ದಿಮೆ ನೌಕರರಾಗಿರುವ ವ್ಯಕ್ತಿಗಳನ್ನು ಆಯೋಗದ ಮುಂದೆ ಹೇಳಿಕೆ ನೀಡಲು ಅಥವಾ ದಾಖಲೆಗಳನ್ನು ಹಾಜರುಪಡಿಸಲು ಸಮನ್ ಮಾಡಿದ್ದರೆ, ಅದನ್ನು ಕರ್ತವ್ಯದ ಮೇಲೆ ಎಂಬುದಾಗಿ ಭಾವಿಸತಕ್ಕದ್ದು.

(3) ಆಯೋಗದ ಸದಸ್ಯ ಕಾರ್ಯದರ್ಶಿಯು ಹಾಗೆ ಹಾಜರಾಗುವ ಸಂಬಂಧಪಟ್ಟ ವ್ಯಕ್ತಿಗಳಿಗೆ ಮೇಲಿನಂತೆ ಪಾವತಿ ಮಾಡುವ ಅಂಥ ಕ್ಲೇಮುಗಳನ್ನು ಪಾಲಿಸಲು ಸೂಕ್ತ ವಿಧಾನವನ್ನು ರೂಪಿಸಬಹುದು.

(4) ಮೇಲಿನಂತೆ ಪ್ರಯಾಣ ವೆಚ್ಚಗಳಿಗಾಗಿ ಕ್ಲೇಮು, ವ್ಯಕ್ತಿಯು ಸ್ವಂತ ಒಪ್ಪಿಗೆಯ ಮೇಲೆ ಮಾಡುವ ಯಾವುದೇ ತನಿಖೆ ಅಥವಾ ವಿಚಾರಣೆಯಲ್ಲಿ ಅಥವಾ ಆಯೋಗವು ಸಮನ್ ಜಾರಿಗೊಳಿಸಿದ ಸೂಚನೆ ಅಥವಾ ನೋಟೀಸಿಗಾಗಿ ಆಯೋಗದ ಮುಂದೆ ಹಾಜರಾಗುವಂಥ ವ್ಯಕ್ತಿಯ ಸಂಬಂಧದಲ್ಲಿ ಅನ್ವಯಿಸತಕ್ಕದ್ದಲ್ಲ.

**ಅಧ್ಯಾಯ – VII**

**15. ಆಯೋಗದ ಸಲಹಾ ಕಾರ್ಯ:–** ಆಯೋಗವು ತನ್ನ ಸದಸ್ಯ ಕಾರ್ಯದರ್ಶಿಯವರ ಮೂಲಕ ಸಭೆಗಳು, ವೈಯಕ್ತಿಕ ಸಂಪರ್ಕಗಳು, ಭೇಟಿಗಳು ಹಾಗೂ ಪತ್ರವ್ಯವಹಾರಗಳ ಮುಖಾಂತರ ರಾಜ್ಯ ಸರ್ಕಾರಿ ಇಲಾಖೆಗಳು / ಇತರ ಸಂಸ್ಥೆಗಳೊಂದಿಗೆ ಪರಸ್ಪರ ಕಾರ್ಯನಿರ್ವಹಿಸತಕ್ಕದ್ದು. ಈ ಸಂಬಂಧದಲ್ಲಿ ಮಾಹಿತಿಯನ್ನು, ಸಾಕಷ್ಟು ಮುಂಚಿತವಾಗಿ ಸಂಬಂಧಪಟ್ಟ ಇಲಾಖೆ / ಸಂಸ್ಥೆಗಳಿಗೆ ಕಳುಹಿಸಬಹುದು.

**16. ರಾಜ್ಯ ಯೋಜನಾ ಮಂಡಳಿಯೊಂದಿಗೆ ಪರಸ್ಪರ ಕಾರ್ಯನಿರ್ವಹಣೆ:–** ಆಯೋಗವು, ಸಮಿತಿಗಳು, ಕಾರ್ಯನಿರ್ವಾಹಕ ಸಮೂಹಗಳು ಅಥವಾ ಯೋಜನಾ ಮಂಡಳಿಯು ಸ್ಥಾಪಿಸಿದಂಥ ಇತರ ಸಂಸ್ಥೆಗಳ ಮನವಿಗಳ ಮೂಲಕ ಸೂಕ್ತ ಹಂತಗಳಲ್ಲಿ ರಾಜ್ಯ ಯೋಜನಾ ಮಂಡಳಿಯೊಂದಿಗೆ ಪರಸ್ಪರ ವ್ಯವಹರಿಸತಕ್ಕದ್ದು. ಆಯೋಗವು, ಅನುಸೂಚಿತ ಜಾತಿಗಳು ಮತ್ತು ಅನುಸೂಚಿತ ಪಂಗಡಗಳಿಗೆ ಸಂಬಂಧಪಟ್ಟ ಎಲ್ಲಾ ಕಾರ್ಯಕ್ರಮಗಳು ಹಾಗೂ ಯೋಜನೆ ಹಾಗೂ ಅಭಿವೃದ್ಧಿ ಮತ್ತು ಮೌಲ್ಯಮಾಪನದ ವಿಧಾನಗಳಿಗೆ ಸಂಬಂಧಿಸಿದ ಎಲ್ಲಾ ದಾಖಲೆಗಳ ಪ್ರತಿಗಳನ್ನು ಕಳುಹಿಸಲು ಯೋಜನಾ ಮಂಡಳಿಯನ್ನು ಕೋರಬಹುದು.

**ಅಧ್ಯಾಯ – VIII**

**17. ಆಯೋಗದ ಕಾರ್ಯಗಳ ಮೇಲ್ವಿಚಾರಣೆ:–** (1) ಆಯೋಗವು, ಕಾಲಕಾಲಕ್ಕೆ ಅನುಸೂಚಿತ ಜಾತಿಗಳು ಹಾಗೂ ಅನುಸೂಚಿತ ಪಂಗಡಗಳಿಗಾಗಿ ಉಪಬಂಧಿಸಲಾದ ಸುರಕ್ಷತೆಗಳು ಹಾಗೂ ಇತರ ಸಾಮಾಜಿಕ ಆರ್ಥಿಕ ಅಭಿವೃದ್ಧಿಪರ ಕ್ರಮಗಳಿಗೆ ಸಂಬಂಧಪಟ್ಟಂತೆ ತಾನು ಮೇಲ್ವಿಚಾರಣೆ ಮಾಡುವ ವಿಷಯಗಳು ಅಥವಾ ಸಂಗತಿಗಳು ಮತ್ತು ಪ್ರದೇಶಗಳನ್ನು ನಿರ್ವಹಣೆ ಮಾಡಬಹುದು.

**18. ವಿವರಪಟ್ಟಿಗಳು ಹಾಗೂ ವರದಿಗಳು:–** (1) ಆಯೋಗವು ಮೇಲ್ವಿಚಾರಣೆ ಮಾಡಬೇಕಾದಂಥ ವಿಷಯದ ನಿಯಂತ್ರಣದ ಜವಬ್ದಾರಿ ಹೊಂದಿರುವ ಯಾವುದೇ ಪ್ರಾಧಿಕಾರವು, ಆಯೋಗವು ಅಗತ್ಯಪಡಿಸಿದಂತೆ ವರದಿಗಳನ್ನು ಒದಗಿಸತಕ್ಕದ್ದು.

(2) ಆಯೋಗವು ಕಾಲಕಾಲಕ್ಕೆ ಅನುಸೂಚಿತ ಜಾತಿಗಳು ಹಾಗೂ ಅನುಸೂಚಿತ ಪಂಗಡಗಳಿಗಾಗಿ ಇರುವ ಸುರಕ್ಷತಾ ಕಾರ್ಯಗಳ ಅನುಷ್ಠಾನ ಪ್ರಭಾರಹೊಂದಿರುವಂಥ ರಾಜ್ಯ ಸರ್ಕಾರಿ ಇಲಾಖೆಗಳು, ಸ್ಥಳೀಯ ಸಂಸ್ಥೆಗಳು, ನಿಗಮಿತ ನಿಕಾಯಗಳು ಅಥವಾ ಯಾವುದೇ ಇತರ ಪ್ರಾಧಿಕಾರಗಳಿಂದ ಯಾವುದೇ ನಿರ್ದಿಷ್ಟ ವಿಷಯ ಅಥವಾ ಸಂಗತಿಯ ಬಗ್ಗೆ ಮಾಹಿತಿ ಹಾಗೂ ವಿವರವನ್ನು ಒದಗಿಸಲು ಸೂಚನೆಗಳನ್ನು ಹೊರಡಿಸಬಹುದು.

**19. ಅನುಸರಣ ಕ್ರಮ:–** (1) ಮೇಲ್ವಿಚಾರಣೆ ಕಾರ್ಯವನ್ನು ಪರಿಣಾಮಕಾರಿಯಾಗಿ ಮಾಡುವ ಕ್ರಮವಾಗಿ ಆಯೋಗವು ಮಾಹಿತಿಯನ್ನು ಪಡೆದುಕೊಂಡ ತರುವಾಯ ಹಾಗೂ ಸಾಧ್ಯವಾದಷ್ಟು ಬೇಗನೆ ನಿರ್ಣಯವನ್ನು ತೆಗೆದುಕೊಂಡ ಮೇಲೆ ರಕ್ಷಣಾ ಕಾರ್ಯಗಳ ಅನುಷ್ಠಾನದಲ್ಲಿ ಗಮನಿಸಿದಂಥ ನ್ಯೂನತೆಗಳನ್ನು ವಿವರಿಸಿ, ಸಂಬಂಧಪಟ್ಟ ಪ್ರಾಧಿಕಾರಕ್ಕೆ ವಿಷಯಗಳನ್ನು ತಿಳಿಸಬೇಕು ಹಾಗೂ ಅಗತ್ಯ ಸೂಕ್ತ ಕ್ರಮಗಳನ್ನು ಸಲಹೆ ಮಾಡಬೇಕು.

(2) ಆಯೋಗವು (1)ನೇ ಉಪ–ನಿಯಮದ ಮೇರೆಗೆ ಕಳುಹಿಸಿದ ವಿಷಯಾನುಸಾರ ಕೈಗೊಂಡ ಕ್ರಮದ ಬಗ್ಗೆ ಸಂಬಂಧಪಟ್ಟ ಪ್ರಾಧಿಕಾರದ ಅಭಿಪ್ರಾಯಗಳನ್ನು ಕೋರಬಹುದು.

(3) ಆಯೋಗವು ಸಂವಿಧಾನದ ಮೇರೆಗೆ ಅಥವಾ ತತ್ಕಾಲದಲ್ಲಿ ಜಾರಿಯಲ್ಲಿರುವ ಯಾವುದೇ ಇತರ ಕಾನೂನಿನ ಮೇರೆಗೆ ಅಥವಾ ರಾಜ್ಯ ಸರ್ಕಾರದ ಯಾವುದೇ ಆದೇಶದ ಮೇರೆಗೆ ಅನುಸೂಚಿತ ಜಾತಿಗಳು ಹಾಗೂ ಪರಿಶಿಷ್ಟ ಪಂಗಡಗಳಿಗಾಗಿ ಇರುವ ರಕ್ಷಣಾ ಕ್ರಮಗಳು ಹಾಗೂ ಸಾಮಾಜಿಕ, ಆರ್ಥಿಕ ಅಭಿವೃದ್ಧಿ ಕ್ರಮಗಳಿಗೆ ಸಂಬಂಧಪಟ್ಟ ವಿಷಯಗಳ ಮೇಲ್ವಿಚಾರಣಾ ಕಾರ್ಯವಿಧಾನದ ಮೂಲಕ ಅಭಿಪ್ರಾಯ ಪಟ್ಟ ತನ್ನ ತೀರ್ಮಾನಗಳು ಮತ್ತು ಗೊತ್ತುವಳಿಗಳನ್ನು ತನ್ನ ವಾರ್ಷಿಕ ವರದಿ ಅಥವಾ ಯಾವುದೇ ವಿಶೇಷ ವರದಿಯಲ್ಲಿ ಸೇರಿಸಬಹುದು.

**ಅಧ್ಯಾಯ – IX**

**20. ಆಯೋಗದಿಂದ ಅನೌಪಚಾರಿಕ ಕ್ರಮಗಳು:–** ಆಯೋಗವು ಕಾನೂನಿನ ಮೇರೆಗೆ ಸ್ಪಷ್ಟವಾಗಿ ಉಲ್ಲೇಖಿಸದಂಥ ವಿಷಯಗಳು ಅಥವಾ ಪ್ರಕರಣಗಳ ವಿಶೇಷ ಪ್ರಕರಣಗಳಲ್ಲಿ ಅಂದರೆ ಅನುಸೂಚಿತ ಜಾತಿಗಳು ಅಥವಾ ಅನುಸೂಚಿತ ಪಂಗಡಗಳಿಗೆ ಸೇರಿದ ವ್ಯಕ್ತಿ ಅಥವಾ ಅಂಥ ವ್ಯಕ್ತಿಗಳ ಸಮೂಹದ ಕ್ಷೇಮಾಭಿವೃದ್ಧಿಯಂಥ ವಿಷಯವಾಗಿದ್ದರೆ ಪತ್ರ ವ್ಯವಹಾರವನ್ನು ಆರಂಭಿಸಬಹುದು ಹಾಗೂ ಈ ವರ್ಗಗಳ ವ್ಯಕ್ತಿಗಳ ಹಿತಾಸಕ್ತಿಯನ್ನು ರಕ್ಷಿಸುವಂತ ತನ್ನ ಅಂತರ್ಗತ ಸಾಮಾರ್ಥ್ಯದಲ್ಲಿ ಆಯೋಗಕ್ಕೆ ಅಗತ್ಯವಾಗಿದ್ದರೆ ಕ್ರಮಕೈಗೊಳ್ಳಬಹುದು. ಆಯೋಗದಿಂದ ಬರುವ ಎಲ್ಲಾ ನಿಯತ ಔಪಚಾರಿಕ ಪತ್ರ ವ್ಯವಹಾರಗಳನ್ನು ಸದಸ್ಯ ಕಾರ್ಯದರ್ಶಿಯ ಅಥವಾ ಅಧಿಕೃತ ಅಧಿಕಾರಿಯ ಸಹಿಗಳಿಂದ ಹೊರಡಿಸತಕ್ಕದ್ದು. ಆಯೋಗವು, ತನ್ನ ಸದಸ್ಯ ಕಾರ್ಯದರ್ಶಿಯ ಮೂಲಕ ದಾವೆಯನ್ನು ಹೂಡಬಹುದು ಅಥವಾ ದಾವೆಗೆ ಗುರಿಯಾಗಿಸಬಹುದು.

**21. ರಾಜ್ಯ ಸರ್ಕಾರದ ನಿಯಮಗಳು, ಇತ್ಯಾದಿಗಳ ಅನ್ವಯಿಸುವಿಕೆ:–** (1) ರಾಜ್ಯ ಸರ್ಕಾರವು ಹೊರಡಿಸಿದ ಹಾಗೂ ಅನ್ವಯಿಸಬಹುದಾದ ಎಲ್ಲಾ ನಿಯಮಗಳು, ವಿನಿಯಮಗಳು ಹಾಗೂ ಆದೇಶಗಳು ಆಯೋಗಕ್ಕೆ ಸಹ ಅನ್ವಯಿಸತಕ್ಕದ್ದು.

(2) ರಾಜ್ಯ ಸರ್ಕಾರದ ಆರ್ಥಿಕ ಅಧಿಕಾರಗಳ ಪ್ರತ್ಯಾಯೋಜನೆಗೆ ಸಂಬಂಧಿಸಿದ ಉಪಬಂಧಗಳನ್ನು ಆಯೋಗದಲ್ಲಿನ ಸಂವಾದಿ ಅಧಿಕಾರಿಗಳಿಗೆ ಅನ್ವಯಿಸತಕ್ಕದ್ದು.

**22. ಈ ನಿಯಮಗಳಲ್ಲಿ ನಿರ್ದಿಷ್ಟಪಡಿಸಿಲ್ಲದ ವಿಷಯಗಳ ಬಗ್ಗೆ ತೀರ್ಮಾನ:–** ಉಪಬಂಧವನ್ನು ಕಲ್ಪಿಸಿಲ್ಲದಂತ ಯಾವುದೇ ವಿಷಯಕ್ಕೆ ಸಂಬಂಧಿಸಿದಂತೆ ಪ್ರಶ್ನೆಯು ಉದ್ಭವಿಸಿದರೆ, ಅಧ್ಯಕ್ಷರು ತೀರ್ಮಾನವನ್ನು ಕೋರತಕ್ಕದ್ದು. ಅಧ್ಯಕ್ಷರು ಸೂಕ್ತವೆಂದು ಭಾವಿಸಿದರೆ, ವಿಷಯವನ್ನು ಆಯೋಗದ ಸಭೆಯಲ್ಲಿ ಪರಿಗಣಿಸಬಹುದೆಂದು ನಿರ್ದೇಶಿಸಬಹುದು.

**ಅಧ್ಯಾಯ – X**

**23. ಮೌಲ್ಯಮಾಪನ ಮತ್ತು ಅಧ್ಯಯನಗಳು:–** (1) ಆಯೋಗವು ಸರ್ಕಾರದ ಪೂರ್ವಾನುಮೋದನೆಯೊಂದಿಗೆ ಸರ್ಕಾರದಲ್ಲಿ ಸರಕುಗಳು ಮತ್ತು ಸೇವೆಗಳನ್ನು ಪಡೆಯುವುದಕ್ಕಾಗಿ ನಿಯಮಿಸಲಾದಂಥ ವಿಧಾನದಲ್ಲಿ ಈ ಸಂಬಂಧದಲ್ಲಿ ಹೊರಡಿಸಲಾದ ನಿರ್ಣಯಗಳ ಮೂಲಕ ರಾಜ್ಯದಲ್ಲಿ ಅನುಸೂಚಿತ ಜಾತಿ ಅಥವಾ ಅನುಸೂಚಿತ ಪಂಗಡಗಳ ಸೌಲಭ್ಯಕ್ಕೆ ಯಾವುದೇ ಮೌಲ್ಯಮಾಪನ ಹಾಗೂ ಅಧ್ಯಯನಗಳನ್ನು ಕೈಗೊಳ್ಳಬಹುದು.

(2) ಅಂಥ ಪ್ರತಿಯೊಂದು ಮೌಲ್ಯಮಾಪನ ಹಾಗೂ ಅಧ್ಯಯನಗಳ ತರುವಾಯ ವರದಿಯೊಂದನ್ನು ಆಯೋಗದ ಮುಂದೆ ಮಂಡಿಸತಕ್ಕದ್ದು ಹಾಗೂ ಆಯೋಗವು ತಾನು ಸೂಕ್ತವೆಂದು ಭಾವಿಸಬಹುದಾದಂಥ ಕ್ರಮವನ್ನು ಕೈಗೊಳ್ಳಬಹುದು ಅಥವಾ ಯುಕ್ತ ಕ್ರಮಕ್ಕೆ ಅಧ್ಯಯನದ ವರದಿಯ ಪ್ರತಿಯನ್ನು ಸರ್ಕಾರಕ್ಕೆ ಕಳುಹಿಸಬಹುದು.

**ಅಧ್ಯಾಯ – XI**

**24. ಬಜೆಟ್, ಲೆಕ್ಕಪತ್ರಗಳು, ಲೆಕ್ಕಪರಿಶೋಧನೆ ಹಾಗೂ ವಾರ್ಷಿಕ ವರದಿ:–** (1) ಆಯೋಗದ ಬಜೆಟ್‌ಅನ್ನು ಪ್ರತಿ ವರ್ಷದ 30ನೇ ನವೆಂಬರ್ ಮೊದಲೇ ತಯಾರಿಸತಕ್ಕದ್ದು ಹಾಗೂ ಪ್ರತಿ ವರ್ಷದ ಡಿಸೆಂಬರ್‌ನ ಮೊದಲ ವಾರದ ಅವಧಿಯಲ್ಲಿ ಅನುಮೋದನೆಗಾಗಿ ಸರ್ಕಾರಕ್ಕೆ ದ್ವಿಪ್ರತಿಯಲ್ಲಿ ಸಲ್ಲಿಸತಕ್ಕದ್ದು.

(2) ಆಯ–ವ್ಯಯದ ಅನುಧಾನಗಳನ್ನು ಸ್ವೀಕರಿಸುವುದಕ್ಕೆ ಸಂಬಂಧಪಟ್ಟಂಥ ಲೆಕ್ಕಪತ್ರಗಳ ವಿವರಣಾ ಪಟ್ಟಿ ಹಾಗೂ ಆಯ–ವ್ಯಯದ ಅನುಧಾನಗಳ ಸಂಬಂಧದಲ್ಲಿನ ವೆಚ್ಚದ ಲೆಕ್ಕಪತ್ರಗಳ ವಿವರಣಾ ಪಟ್ಟಿ ಹಾಗೂ ಆಯೋಗದ ಎಲ್ಲಾ ಲೆಕ್ಕ ಪತ್ರಗಳನ್ನು, ಕಾಲಕಾಲಕ್ಕೆ ಸರ್ಕಾರದ ನಿರ್ದೇಶನಗಳಿಗನುಸಾರವಾಗಿ ನಿರ್ವಹಿಸತಕ್ಕದ್ದು.

(3) ಆಯೋಗದ ಲೆಕ್ಕಪತ್ರಗಳನ್ನು ಕರ್ನಾಟಕದ ಮಹಾಲೇಖಪಾಲರ ಮೂಲಕ ಆ ವರ್ಷದಲ್ಲಿ ಲೆಕ್ಕಪರಿಶೋಧನೆ ಮಾಡಿಸತಕ್ಕದ್ದು.

(4) ಆಯೋಗದ ವಾರ್ಷಿಕ ವರದಿಯನ್ನು ಸಿದ್ದಪಡಿಸತಕ್ಕದ್ದು ಮತ್ತು ಅಧಿನಿಯಮದ 15ನೇ ಪ್ರಕರಣದ ಮೇರೆಗೆ ಅಗತ್ಯಪಡಿಸಲಾದಂತೆ ಕಳೆದ ವರ್ಷದ ಅವಧಿಯಲ್ಲಿ ನಡೆಸಿದ ತನ್ನ ಕಾರ್ಯಚಟುವಟಿಕೆಗಳ ಸಂಪೂರ್ಣ ಲೆಕ್ಕಪತ್ರಗಳನ್ನು ಸೂಚಿಸಿದ ಹಣಕಾಸು ವರ್ಷ ಪೂರ್ಣಗೊಂಡ ದಿನಾಂಕದಿಂದ ಮೂರು ತಿಂಗಳುಗಳೊಳಗೆ ಸರ್ಕಾರಕ್ಕೆ ಕಳುಹಿಸತಕ್ಕದ್ದು. ಸರ್ಕಾರವು, ವಿಧಾನಮಂಡಳದ ಉಭಯ ಸದನಗಳ ಮುಂದೆ ಇದನ್ನು ಮಂಡಿಸಬಹುದು.

(5) ಲೆಕ್ಕ ಪರಿಶೋಧಕರ ವರದಿಯನ್ನು ಸ್ವೀಕರಿಸಿದ ಕೂಡಲೇ ಆಯೋಗವು ವಿಧಾನಮಂಡಳದ ಉಭಯ ಸದನಗಳ ಮುಂದೆ ಇದನ್ನು ಮಂಡಿಸಲು ಸರ್ಕಾರದ ಲೆಕ್ಕಪರಿಶೋಧಕರ ವರದಿಯೊಂದಿಗೆ ಲೆಕ್ಕಪತ್ರಗಳ ವಾರ್ಷಿಕ ವಿವರಪಟ್ಟಿಯ ಪ್ರತಿಯನ್ನು ಕಳುಹಿಸತಕ್ಕದ್ದು.

**25. ಆಯೋಗದ ಮೊಹರು:–** ಆಯೋಗದ ಮೊಹರು ಅಧ್ಯಕ್ಷರು ಈ ಬಗ್ಗೆ ಹೊರಡಿಸಲಾದ ಆದೇಶದ ಮೂಲಕ ನಿರ್ದಿಷ್ಟಪಡಿಸಲಾದಂತೆ ಇರತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಎನ್. ನರಸಿಂಹ ಮೂರ್ತಿ**

ಸರ್ಕಾರದ ಅಧೀನ ಕಾರ್ಯದರ್ಶಿ–II

ಸಮಾಜ ಕಲ್ಯಾಣ ಇಲಾಖೆ

**ನಮೂನೆ–I**

**ಕರ್ನಾಟಕ ರಾಜ್ಯ ಅನುಸೂಚಿತ ಜಾತಿಗಳು ಮತ್ತು ಅನುಸೂಚಿತ ಪಂಗಡಗಳ ಆಯೋಗ**

# **14/3, 2ನೇ ಮಹಡಿ, ಸಿಎಫ್‌ಸಿ ಕಟ್ಟಡ, ನೃಪತುಂಗ ರಸ್ತೆ, ಬೆಂಗಳೂರು – 560001.**

**ಮೂಲ ಸಂಗತಿಗಳ ಸಂಗ್ರಹಣೆಗಾಗಿ ನೋಟೀಸು**

**ಗೆ,**

ಈ ನೋಟೀಸಿನೊಂದಿಗೆ ಲಗತ್ತಿಸಿರುವ ದಿನಾಂಕ: ______________________ ರಂದು ______________________ ರಲ್ಲಿ ಹಾಜರಾಗಿ ______________________ ಶೀರ್ಷಿಕೆ ಅಡಿಯಲ್ಲಿ ______________________ ವೃತ್ತ ಪತ್ರಿಕೆ ವಾರ್ತೆಗಳಿಂದ ಕರ್ನಾಟಕ ರಾಜ್ಯ ಅನುಸೂಚಿತ ಜಾತಿಗಳು ಮತ್ತು ಅನುಸೂಚಿತ ಪಂಗಡಗಳಿಂದ ಅರ್ಜಿ / ಫಿರ್ಯಾದು / ಮಾಹಿತಿಯನ್ನು ಆಯೋಗವು ಸ್ವೀಕರಿಸಿರುವುದರಿಂದ ಮತ್ತು ಆಯೋಗವು ವಿಷಯವನ್ನು ತಮಗೆ ಪ್ರದತ್ತವಾದ ಅಧಿಕಾರಗಳನುಸಾರವಾಗಿ ತನಿಖೆ / ವಿಚಾರಣೆ ಮಾಡಲು ತೀರ್ಮಾನಿಸಿರುವುದರಿಂದ, ಈ ಮೂಲಕ ನಿಮ್ಮನ್ನು ಈ ನೋಟೀಸನ್ನು ಅಂಚೆ ಅಥವಾ ಖುದ್ದಾಗಿ ಅಥವಾ ಇತರ ಯಾವುದೇ ಸಂಪರ್ಕದ ಮೂಲಕವಾಗಲಿ ಸ್ವೀಕರಿಸಿದ ದಿನಾಂಕದಿಂದ 30 ದಿನಗಳ ಒಳಗಾಗಿ ಕೆಳಗೆ ಸಹಿ ಮಾಡಿದವರಿಗೆ ಆಪಾದನೆಗಳು / ವಿಷಯಗಳ ಸಂಬಂಧ ಕೈಗೊಂಡ ಕ್ರಮದ ಬಗ್ಗೆ ಸಂಗತಿಗಳು ಮತ್ತು ಮಾಹಿತಿಯನ್ನು ಸಲ್ಲಿಸಲು ಕೋರಲಾಗಿದೆ.

ನಿಗಧಿತ ಕಾಲದೊಳಗೆ ನಿಮ್ಮಿಂದ ಉತ್ತರವನ್ನು ಆಯೋಗವು ಸ್ವೀಕರಿಸಿಲ್ಲದ ಪ್ರಕರಣದಲ್ಲಿ, ಆಯೋಗವು ಕರ್ನಾಟಕ ರಾಜ್ಯ ಅನುಸೂಚಿತ ಜಾತಿಗಳು ಮತ್ತು ಅನುಸೂಚಿತ ಪಂಗಡಗಳ ಆಯೋಗದ ಅಧಿನಿಯಮದ ಮೇರೆಗೆ ತನಗೆ ಪ್ರದತ್ತವಾದ ಸಿವಿಲ್ ನ್ಯಾಯಾಲಯಗಳ ಅಧಿಕಾರಗಳನ್ನು ಚಲಾಯಿಸಬಹುದು ಮತ್ತು ಆಯೋಗದ ಮುಂದೆ ಖುದ್ದಾಗಿ ಅಥವಾ ಪ್ರತಿನಿಧಿಯ ಮೂಲಕ ಹಾಜರಾಗಲು ನಿಮಗೆ ಸಮನ್ಸ್ ನೀಡಲಾಗಿದೆ ಎಂಬ ನೋಟೀಸನ್ನು ತೆಗೆದುಕೊಳ್ಳಬೇಕು.

ಸಹಿ/–

ಕಾರ್ಯದರ್ಶಿ / ಅಧಿಕೃತಗೊಳಿಸಲಾದ ಅಧಿಕಾರಿ

ಕರ್ನಾಟಕ ರಾಜ್ಯ / ಅನುಸೂಚಿತ ಜಾತಿಗಳು / ಅನುಸೂಚಿತ ಪಂಗಡಗಳ ಆಯೋಗ

ದಿನಾಂಕ:–

